# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೬, ೨೦೧೨ (ಭಾದ್ರಪದ ೧೫, ಶಕ ವರ್ಷ ೧೯೩೪) | ಸಂಚಿಕೆ ೩೬ |
|---|---|---|


## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ. ಇವರ ನ್ಯಾಯಾಲಯದಲ್ಲಿ**

**ಪ್ರಕರಣ ಸಂ: ಇಎಕ್ಸ್‌ಇ/ಚಿಪುರ/ಡಿಟಿಸಿಆರ್/182/2010–11, ದಿನಾಂಕ: 25/05/2012**

**ಉಪಸ್ಥಿತರು:– ಎನ್. ಚಂದ್ರಶೇಖರ,** ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ.

| ಪಿರ್ಯಾದುದಾರರು:– | –ವಿರುದ್ಧ– | ಆರೋಪಿ:– |
|---|---|---|
| ಅಬಕಾರಿ ನಿರೀಕ್ಷಕರು, ಚಿಕ್ಕಬಳ್ಳಾಪುರ ವಲಯ, ಚಿಕ್ಕಬಳ್ಳಾಪುರ. | | ದ್ಯಾವಪ್ಪ ಬಿನ್ ಪಿಳ್ಳಪ್ಪ, ದೊಡ್ಡಕಿರಗಂಬಿ, ಜಾತವಾರ, ಚಿಕ್ಕಬಳ್ಳಾಪುರ ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:–**

ದಿನಾಂಕ:20/12/2010 ರಂದು ಮಧ್ಯಾಹ್ನ 3–20 ಗಂಟೆ ಸಮಯದಲ್ಲಿ ಚಿಕ್ಕಬಳ್ಳಾಪುರ ವಲಯ ಅಬಕಾರಿ ನಿರೀಕ್ಷಕರು ಮತ್ತು ಸಿಬ್ಬಂದಿಯವರು ಅಬಕಾರಿ ಅಕ್ರಮಗಳನ್ನು ತಡೆಗಟ್ಟುವ ಸಲುವಾಗಿ ವ್ಯಾಪ್ತಿ ಪ್ರದೇಶದಲ್ಲಿ ಗಸ್ತು ತಿರುಗುತ್ತಿದ್ದಾಗ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗುತ್ತಿರುವ ಬಗ್ಗೆ ದೊರೆತ ಖಚಿತ ವರ್ತಮಾನವನ್ನು ಚಿಕ್ಕಬಳ್ಳಾಪುರ ತಾಲ್ಲೂಕು ಚಿಕ್ಕಬಳ್ಳಾಪುರದಿಂದ ಶಿಡ್ಲಘಟ್ಟಕ್ಕೆ ಹೋಗುವ ರಸ್ತೆಯಲ್ಲಿರುವ ಅಣಕನೂರು ಗ್ರಾಮಕ್ಕೆ ಹೋಗುವ ರಸ್ತೆಯ ತಿರುವಿನಲ್ಲಿರುವ ಅಣಕನೂರು ಗ್ರಾಮದ ನಾಮಫಲಕದ ಬಳಿ ಸರ್ಕಾರಿ ರಸ್ತೆಯಲ್ಲಿ ರಸ್ತೆಕಾವಲು ಕಾಯುತ್ತಿದ್ದಾಗ ಒಬ್ಬ ಆಸಾಮಿಯು ಚಿಕ್ಕಬಳ್ಳಾಪುರ ಕಡೆಯಿಂದ ದ್ವಿಚಕ್ರ ವಾಹನದಲ್ಲಿ ಬಂದು ಅಣಕನೂರು ಗ್ರಾಮದ ಕಡೆ ವಾಹನವನ್ನು ತಿರುಗಿಸಿದಾಗ ಸದರಿ ವಾಹನವನ್ನು ಅಧಿಕಾರಿಗಳು ನಿಲ್ಲಿಸಲು ಯತ್ನಿಸಲಾಗಿ ಅಧಿಕಾರಿಗಳು ಸಮವಸ್ತ್ರದಲ್ಲಿರುವುದನ್ನು ಕಂಡ ಆಸಾಮಿಯು ವಾಹನವನ್ನು ನಿಲ್ಲಿಸದೆ ಗಾಬರಿಯಿಂದ ಮುಂದೆ ಸಾಗಲು ಪ್ರಯತ್ನಿಸಿದಾಗ ಅನುಮಾನಗೊಂಡ ಅಧಿಕಾರಿಗಳು ಪಂಚರ ಸಮಕ್ಷಮ ವಾಹನವನ್ನು ತಡೆದು ನಿಲ್ಲಿಸಿದಾಗ, ದ್ವಿಚಕ್ರ ವಾಹನದ ಮುಂಭಾಗದಲ್ಲಿ ಒಂದು ಬಿಳಿ ಬಣ್ಣದ ಪ್ಲಾಸ್ಟಿಕ್ ಚೀಲದ ಮೂಟೆಯನ್ನು ಇಟ್ಟುಕೊಂಡಿದ್ದು, ಇದರಲ್ಲಿ ಏನಿದೆ ಎಂದು ಸದರಿ ವಾಹನ ಸವಾರನನ್ನು ಕೇಳಲಾಗಿ ಆತನು ಸರಿಯಾಗಿ ಉತ್ತರ ನೀಡದೇ ಇರುವುದರಿಂದ ಅಧಿಕಾರಿಗಳು ಮೂಟೆಗೆ ಕಟ್ಟಿದ ದಾರವನ್ನು ಬಿಚ್ಚಿ ನೋಡಲಾಗಿ ಇದರಲ್ಲಿ ಮದ್ಯದ ಬಾಟಲುಗಳು ಕಂಡುಬಂದಿದ್ದು, ಮದ್ಯವನ್ನು ಸಾಗಾಣಿಕೆ ಮಾಡಲು ಪರವಾನಿಗೆ ಏನಾದರೂ ಇದೆಯೇ ಎಂದು ಅಧಿಕಾರಿಗಳು ಆಸಾಮಿಯನ್ನು ಕೇಳಲಾಗಿ ಯಾವುದೇ ಪರವಾನಿಗೆ ಹೊಂದಿರುವುದಿಲ್ಲವೆಂದು ತಿಳಿಸಿ ತನ್ನ ಮನೆಯಲ್ಲಿ ಕಾರ್ಯಕ್ಕೆ ತೆಗೆದುಕೊಂಡು ಹೋಗುತ್ತಿರುವುದಾಗಿ ತಿಳಿಸಿರುತ್ತಾನೆ. ತದನಂತರ ಅಧಿಕಾರಿಗಳು ಮೂಟೆಯನ್ನು ಪೂರ್ತಿಯಾಗಿ ಬಿಚ್ಚಿ ನೋಡಲಾಗಿ ಇದರಲ್ಲಿ 180 ಮಿಲಿಯ ಒಟ್ಟು 36 ಮದ್ಯದ ಬಾಟಲುಗಳಿದ್ದು, ಇವುಗಳ ಮೇಲೆ ರಾಜಾ ವಿಸ್ಕಿ ಎಂಬ ಬ್ರಾಂಡಿನ ಲೇಬಲ್‌ಗಳಿರುತ್ತವೆ. ಬಾಟಲುಗಳ ಮುಚ್ಚಳದ ಮೇಲಿರುವ ಭದ್ರತಾ ಚೀಟಿಗಳನ್ನು ಪರಿಶೀಲಿಸಲಾಗಿ ಇದರ ನಂಬರ್‌ಗಳುಳ್ಳ ಭಾಗವನ್ನು ಹರಿದು ಹಾಕಿರುವುದು ಕಂಡುಬಂದಿರುತ್ತದೆ. ನಂತರ ಆಸಾಮಿಯ ಹೆಸರನ್ನು ಕೇಳಲಾಗಿ ದ್ಯಾವಪ್ಪ ಬಿನ್ ಪಿಳ್ಳಪ್ಪ, ದೊಡ್ಡಕಿರಗಂಬಿ ಗ್ರಾಮ, ಚಿಕ್ಕಬಳ್ಳಾಪುರ ತಾಲ್ಲೂಕು ಎಂದು ತಿಳಿಸಿರುತ್ತಾನೆ. ನಂತರ ವಾಹನವನ್ನು ಪರಿಶೀಲಿಸಲಾಗಿ ಕಪ್ಪು ಮತ್ತು ನೀಲಿ ಬಣ್ಣ ಮಿಶ್ರಿತ

ಹೀರೋ ಹೊಂಡಾ ಸ್ಪ್ಲೆಂಡರ್ ಆಗಿದ್ದು, ಇದರ ನೊಂದಣಿ ಸಂ:ಕೆಎ–40 ಜೆ–5725 ಆಗಿದ್ದು, ವಾಹನದ ಮುಂದೆ ಮತ್ತು ಹಿಂದೆ ಎರಡೂ ಕಡೆ ನೊಂದಣಿ ಸಂಖ್ಯೆಯನ್ನು ಕನ್ನಡದಲ್ಲಿ ಬರೆಯಲಾಗಿರುತ್ತದೆ. ನಂತರ ಮೇಲ್ಕಂಡ ಬಾಟಲುಗಳ ಪೈಕಿ 180 ಮಿಲಿಯ ಎರಡು ಬಾಟಲುಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗದು ಅವುಗಳ ಮೂತಿಯನ್ನು ಬಿಳಿಯ ಬಟ್ಟೆಯಿಂದ ಸುತ್ತಿ ದಾರದಿಂದ ಕಟ್ಟಿ ಹರಗಿನಿಂದ ಇಲಾಖಾ ಸೀಲು ಮಾಡಿ ಮಾದರಿ ಸೀಲಿ ಚೀಟಿ ಮತ್ತು ಮಾದರಿ ಚೀಟಿಗಳನ್ನು ತಯಾರಿಸಿ ಪಂಚರ ಸಹಿ ಪಡೆದು ನಂತರ ಮಾದರಿ ಬಾಟಲುಗಳಿಗೆ ಅಂಟಿಸಿ, ನಂತರ ಆಸಾಮಿಗಳನ್ನು ದಸ್ತಗಿರಿ ಮಾಡಿ ಮುದ್ದೆಮಾಲು ಹಾಗೂ ವಾಹನವನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಈ ಕೃತ್ಯಕ್ಕಾಗಿ ತಕ್ಸೀರು ಸಂ:03/2010–11, ದಿನಾಂಕ:20/12/2010 ರಲ್ಲಿ ಮೊಕದ್ದಮೆಯನ್ನು ದಾಖಲಿಸಿ ಆರೋಪಿಯನ್ನು ಪ್ರ.ಮಾ.ವರದಿಯೊಂದಿಗೆ ಘನ ನ್ಯಾಯಾಲಯದ ಮುಂದೆ ಹಾಜರುಪಡಿಸಿದ್ದು, ನಂತರ ಪ್ರ.ಮಾ.ವರದಿ,ವಶಪಡಿಸಿಕೊಂಡಿರುವ ವಸ್ತುಗಳ ಪಟ್ಟಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿ ವಾಹನ ಮತ್ತು ಮದ್ಯವನ್ನು ಮುಂದಿನ ಆದೇಶದವರೆಗೆ ವಲಯ ಕಛೇರಿಯಲ್ಲಿಟ್ಟುಕೊಳ್ಳಲು ಅನುಮತಿ ನೀಡಬೇಕೆಂದು ಕೋರಿರುತ್ತಾರೆ.

ವಶಪಡಿಸಿಕೊಂಡಿರುವ ವಸ್ತುಗಳ ಪಟ್ಟಿ ನಂ:351/2012 ರಲ್ಲಿ ವಾಹನ ಮತ್ತು ಮದ್ಯವನ್ನು ಮುಂದಿನ ಆದೇಶದವರೆಗೆ ವಲಯ ಕಛೇರಿಯಲ್ಲಿಟ್ಟುಕೊಳ್ಳಲು ಪ್ರಾಧಿಕಾರದಿಂದ ಅನುಮತಿ ನೀಡಲಾಗಿದೆ.

ಅಬಕಾರಿ ನಿರೀಕ್ಷಕರು, ಚಿಕ್ಕಬಳ್ಳಾಪುರ ವಲಯ ರವರು ತನಿಖೆಯನ್ನು ಮುಂದುವರೆಸಿ ಜಪ್ತುಪಡಿಸಿದ ಮದ್ಯದಿಂದ ತೆಗೆಯಲಾದ ಮಾದರಿಯನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಕೇಂದ್ರ ರಾಸಾಯನಿಕ ಪ್ರಯೋಗಾಲಯ, ಅಬಕಾರಿ ಇಲಾಖೆ, ಬೆಂಗಳೂರು ಇವರಿಗೆ ಸಲ್ಲಿಸಿದ್ದು, ತಜ್ಞರ ವರದಿ ಸಂ:ಸಿಸಿಎಲ್:1978/2011, ದಿನಾಂಕ:26/03/2011 ರ ಪತ್ರದಂತೆ ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಲಾದ ಮಾದರಿಯಲ್ಲಿ ಮದ್ಯಸಾರದ ಅಂಶ $25.2^{0}$ ಯು.ಪಿ ಇದ್ದು, ಇದರಲ್ಲಿ ಈಥೈಲ್ ಅಲ್ಕೋಹಾಲ್ ಕಂಡುಬಂದಿದ್ದು, ಇದು ಮಾನವನ ಸೇವನೆಗೆ ಯೋಗ್ಯವಾಗಿರುತ್ತದೆ ಎಂದು ತಜ್ಞರು ಅಭಿಪ್ರಾಯ ನೀಡಿದ್ದು, ತಜ್ಞರ ವರದಿಯ ಪ್ರತಿಯನ್ನು ಅಬಕಾರಿ ನಿರೀಕ್ಷಕರು, ಚಿಕ್ಕಬಳ್ಳಾಪುರ ವಲಯ ರವರ ಪತ್ರ ದಿನಾಂಕ:12/05/2011 ರೊಂದಿಗೆ ಲಗತ್ತಿಸಿ ಈ ಮೊಕದ್ದಮೆಯಲ್ಲಿ ಜಪ್ತುಪಡಿಸಲಾದ 6.480 ಲೀ. ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವರದಿ ಸಲ್ಲಿಸಿದ್ದು, ಅದರಂತೆ ಹಿರೋ ಹೊಂಡಾ ಸ್ಪ್ಲೆಂಡರ್ ನೊಂದಣಿ ಸಂ:ಕೆಎ–40 ಜೆ–5725 ರ ವಾಹನ ಹೊರತುಪಡಿಸಿ ಪ್ರಕರಣ ತನಿಖೆ ಕಾಯ್ದರಿಸಿ 6.480 ಲೀ. ಮದ್ಯವನ್ನು ದಿನಾಂಕ;20/05/2011 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮಾದರಿ ಹೊರತುಪಡಿಸಿ ಉಳಿದ ಮದ್ಯವನ್ನು ನಿಯಮಾನುಸಾರ ನಾಶಪಡಿಸಲು ಪ್ರಾಧಿಕಾರದಿಂದ ಆದೇಶಿಸಲಾಗಿತ್ತು.

ಅಬಕಾರಿ ನಿರೀಕ್ಷಕರು, ಚಿಕ್ಕಬಳ್ಳಾಪುರ ವಲಯ ರವರು ತನಿಖೆಯನ್ನು ಮುಂದುವರೆಸಿ ಪ್ರಕರಣದಲ್ಲಿ ಜಪ್ತುಪಡಿಸಿದ ಹಿರೋ ಹೊಂಡಾ ಸ್ಪ್ಲೆಂಡರ್ ನೊಂದಣಿ ಸಂ:ಕೆಎ–40 ಜೆ–5725 ರ ಮಾಲೀಕರ ಬಗ್ಗೆ ಸಂಬಂಧಿಸಿದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ 'ಬಿ' ರಿಜಿಸ್ಟರ್ ಎಕ್ಸ್‌ಟ್ರ್ಯಾಕ್ಟ್ ಪ್ರತಿಯನ್ನು ಪಡೆದು ಸಲ್ಲಿಸಿರುತ್ತಾರೆ.

ಪ್ರಕರಣದ ಆರೋಪಿಗೆ ಮತ್ತು ವಾಹನದ ಮಾಲೀಕರಿಗೆ ಕ್ರಮವಾಗಿ ದಿನಾಂಕ:26/04/2012 ಮತ್ತು ದಿನಾಂಕ:28/12/2011 ರಂದು ಕಲಂ 43(ಬಿ) ಪ್ರಕಾರ ಕಾರಣ ಕೇಳಿ ನೊಟೀಸ್‌ನ್ನು ಆರ್.ಪಿ.ಎ.ಡಿ ಮೂಲಕ ರವಾನಿಸಿದ್ದು ಆರೋಪಿಗೆ ನೊಟೀಸ್ ಜಾರಿಯಾಗಿದ್ದು, ವಾಹನ ಮಾಲೀಕರಿಗೆ ನೊಟೀಸ್ ಜಾರಿಯಾಗದೇ ಈ ಕಛೇರಿಗೆ ವಾಪಸ್ಸು ಬಂದಿರುತ್ತದೆ.

ಅಬಕಾರಿ ನಿರೀಕ್ಷಕರು, ಚಿಕ್ಕಬಳ್ಳಾಪುರ ವಲಯ ಇವರ ದಿನಾಂಕ:23/05/2012 ರ ಪತ್ರದಲ್ಲಿ ಈ ಪ್ರಕರಣದಲ್ಲಿನ ಆರೋಪಿಯು ನ್ಯಾಯಾಲಯಕ್ಕೆ ಹಾಜರಾಗುತ್ತಿದ್ದು, ವಾಹನ ಮಾಲೀಕರಿಗೆ ಪ್ರಾಧಿಕಾರದಿಂದ ಹೊರಡಿಸಿದ ಕಾರಣ ಕೇಳುವ ನೊಟೀಸ್‌ನ್ನು ಜಾರಿ ಮಾಡಲು ಮಾಲೀಕರ ವಿಳಾಸಕ್ಕೆ ದಿನಾಂಕ:30/04/2012 ರಂದು ಸಿಬ್ಬಂದಿಯೊಂದಿಗೆ ಖುದ್ದಾಗಿ ಹೋಗಿ ಅಲ್ಲಿನ ವಿಳಾಸದಲ್ಲಿ ವಾಸವಿರುವ ಜನ ಸಾಮಾನ್ಯರನ್ನು ವಿಚಾರಿಸಲಾಗಿ ಸದರಿ ವಾಹನ ಮಾಲೀಕರು ಪತ್ತೆಯಾಗಿರುವುದಿಲ್ಲ. ಈ ಬಗ್ಗೆ ಸ್ಥಳ ಮಹಜರ್ ಕ್ರಮ ಜರುಗಿಸಿ ಹಾಜರಿದ್ದ ಪಂಚರ ಸಹಿ ಪಡೆದಿರುವುದಾಗಿ ಹಾಗೂ ಪ್ರಕರಣದಲ್ಲಿ ಜಪ್ತುಪಡಿಸಿರುವ ವಾಹನದ ಮೂಲ ದಾಖಲಾತಿಗಳೊಂದಿಗೆ ಈ ಕಛೇರಿಗೆ ವಾಹನ ಮಾಲೀಕರಾಗಲೀ / ಆರೋಪಿಯಾಗಲೀ ಇಲ್ಲಿಯವರೆವಿಗೂ ಮುಂದೆ ಬಾರದೇ ಇರುವುದರಿಂದ ಈ ವಾಹನಕ್ಕೆ ವಾರಸ್ಸುದಾರರಿಲ್ಲದ ವಾಹನವೆಂದು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಸಿ) ಅಡಿಯಲ್ಲಿ ಹಿರೋ ಹೊಂಡಾ ಸ್ಪ್ಲೆಂಡರ್+ ನೊಂದಣಿ ಸಂ:ಕೆಎ–40 ಜೆ–5725 ರ ದ್ವಿಚಕ್ರ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸುನೊಂದಿಗೆ ವರದಿ ಮಾಡಿರುತ್ತಾರೆ.

ದಿನಾಂಕ:25/05/2012 ರಂದು ಪ್ರಕರಣವನ್ನು ಪ್ರಾಧಿಕಾರದಲ್ಲಿ ವಿಚಾರಣೆಗೆ ತೆಗೆದುಕೊಳ್ಳಲಾಗಿ ವಾಹನ ಮಾಲೀಕತ್ವ ಹೊಂದಿರುವವರು ಈ ಪ್ರಾಧಿಕಾರದ ಮುಂದೆ ಇಲ್ಲಿಯತನಕ ಯಾರೂ ಹಾಜರಾಗಿರುವುದಿಲ್ಲ. ಅಬಕಾರಿ ನಿರೀಕ್ಷಕರು, ಚಿಕ್ಕಬಳ್ಳಾಪುರ ವಲಯ ಇವರು ದಿನಾಂಕ:20/12/2010 ರಂದು ಚಿಕ್ಕಬಳ್ಳಾಪುರ ತಾಲ್ಲೂಕು ಅಣಕನೂರು ಗ್ರಾಮದ ನಾಮಫಲಕದ ಬಳಿ ರಸ್ತೆಯಲ್ಲಿ ರಸ್ತೆಕಾವಲು ಮಾಡುತ್ತಿದ್ದಾಗ ಹಿರೋ ಹೊಂಡಾ ಸ್ಪ್ಲೆಂಡರ್+ ನೊಂದಣಿ ಸಂ:ಕೆಎ–40 ಜೆ–5725 ರ ದ್ವಿಚಕ್ರ ವಾಹನದಲ್ಲಿ 6.480 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುವ ಸಮಯದಲ್ಲಿ ಜಪ್ತುಪಡಿಸಿರುವುದು ಪ್ರಕರಣದ ದಾಖಲಾತಿಗಳಿಂದ ಹಾಗೂ ರಾಸಾಯನಿಕ ತಜ್ಞರ ವರದಿಯನ್ವಯ ಜಪ್ತುಪಡಿಸಿರುವ ಮದ್ಯದಲ್ಲಿ ಈಥೈಲ್ ಆಲ್ಕೋಹಾಲ್ ಅಂಶ ಕಂಡು ಬಂದಿರುವುದರಿಂದ ಈ ವಾಹನವನ್ನು ಅಬಕಾರಿ ವಸ್ತುಗಳ ಅಕ್ರಮ ಸಾಗಾಣಿಕೆಗೆ ಉಪಯೋಗಿಸಿರುವುದು ಸಾಬೀತಾಗಿರುತ್ತದೆ ಆದುದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

ಎನ್. ಚಂದ್ರಶೇಖರ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿ ಕ್ರಮ ಜರುಗಿಸಲಾಗಿದ್ದು, ಅಬಕಾರಿ ನಿರೀಕ್ಷಕರು, ಚಿಕ್ಕಬಳ್ಳಾಪುರ ವಲಯ, ಚಿಕ್ಕಬಳ್ಳಾಪುರ ರವರ ದಿನಾಂಕ:20/12/2010 ರ ಪ್ರ.ಮಾ.ವ.ಸಂಖ್ಯೆ 03/2010-11 ರಲ್ಲಿ ಜಪ್ತುಪಡಿಸಿರುವ ಹಿರೋ ಹೊಂಡಾ ಸ್ಪ್ಲೆಂಡರ್+ ನೊಂದಣಿ ಸಂ:ಕೆಎ-40 ಜೆ-5725 ರ ಇಂಜಿನ್ ನಂ:06ಎ೦15ಇ48920, ಚಾಸೀಸ್ ನಂ:06ಎ೦16ಎಫ್48615 ರ ದ್ವಿಚಕ್ರ ವಾಹನವನ್ನು ವಾರಸ್ಸುದಾರರಿಲ್ಲದ ವಾಹನವೆಂದು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ವಾಹನಕ್ಕೆ ಸಂಬಂಧಿಸಿದಂತೆ ಈ ಆದೇಶದ ವಿರುದ್ದ ಮೇಲ್ಮನವಿ ಸಲ್ಲಿಸುವುದಾದಲ್ಲಿ ಈ ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸಗಳೊಳಗೆ ಸಲ್ಲಿಸಬಹುದಾಗಿದೆ. ತಪ್ಪಿದ್ದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವನ್ನು ದಿನಾಂಕ:25/05/2012 ರಂದು ಈ ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಿರುತ್ತೇನೆ. ಮೇಲ್ಮನವಿ ಅವಧಿ ಮುಗಿದ ನಂತರ ಕಾನೂನು ರೀತ್ಯಾ ಮೇಲ್ಕಂಡ ವಾಹನವನ್ನು ವಿಲೇವಾರಿ ಮಾಡಲು ಆದೇಶಿಸಿದೆ.

**ಎನ್. ಚಂದ್ರಶೇಖರ,**
ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪಆಯುಕ್ತರು,
ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ.

**ಪಿ.ಆರ್. 799**

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ತುಮಕೂರು ಉಪವಿಭಾಗ, ತುಮಕೂರು ರವರ ನ್ಯಾಯಾಲಯದಲ್ಲಿ**

**ಅಧಿಭಾರ ಅರ್ಜಿ ಸಂಖ್ಯೆ: 01/2012-13**

| **ವಾದಿಗಳು** | **ವಿರುದ್ದ** | **ಪ್ರತಿವಾದಿಗಳು** |
|---|---|---|
| ಕಾರ್ಯದರ್ಶಿ,<br>ಇಂದಾದ್ ಅಲ್ಪಸಂಖ್ಯಾತರರ ಪತ್ತಿನ ಸಹಕಾರ ಸಂಘ ನಿ.<br>ಹುಲಿಯೂರುದುರ್ಗ, ಕುಣಿಗಲ್ ತಾ|| | | 1. ಶ್ರೀಮತಿ ಹೆಚ್.ಪಿ. ಜಯಲಕ್ಷ್ಮಿ, ಮಾಜಿ ಕಾರ್ಯದರ್ಶಿ<br>ಇಂದಾದ್ ಅಲ್ಪಸಂಖ್ಯಾತರರ ಪತ್ತಿನ ಸಹಕಾರ ಸಂಘ ನಿ.<br>ಹುಲಿಯೂರುದುರ್ಗ, ಕುಣಿಗಲ್ ತಾ|| . |
| | | 2. ಎಂ.ರಸೂಲ್ ಖಾನ್, ಮಾಜಿ ಅಧ್ಯಕ್ಷರು,<br>ಇಂದಾದ್ ಅಲ್ಪಸಂಖ್ಯಾತರರ ಪತ್ತಿನ ಸಹಕಾರ ಸಂಘ ನಿ.<br>ಹುಲಿಯೂರುದುರ್ಗ, ಕುಣಿಗಲ್ ತಾ|| . |

**ವಿಷಯ :** ಇಂದಾದ್ ಅಲ್ಪಸಂಖ್ಯಾತರರ ಪತ್ತಿನ ಸಹಕಾರ ಸಂಘ ನಿ. ಹುಲಿಯೂರುದುರ್ಗ ಕುಣಿಗಲ್ ತಾ|| ಇದರಲ್ಲಿ ನಡೆದಿರುವ ಹಣ ದುರುಪಯೋಗದ ಬಗ್ಗೆ ಮಾಜಿ ಅಧ್ಯಕ್ಷರು, ಇವರ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಸಹಕಾರಿ ಕಾಯ್ದೆ ಕಲಂ 103 ರಡಿಯಲ್ಲಿ ತೀರ್ಪು ಪೂರ್ವ ಜಪ್ತಿ ಆದೇಶ ಮಾಡುವ ಬಗ್ಗೆ.

**ಉಲ್ಲೇಖ:** 1) ಸಂಘದ ಕಾರ್ಯದರ್ಶಿ ಮತ್ತು ಅಧ್ಯಕ್ಷರ ಅರ್ಜಿಯ ದಿ:23-4-2012.
2) ಇಂದಾದ್ ಅಲ್ಪಸಂಖ್ಯಾತರರ ಪತ್ತಿನ ಸಹಕಾರ ಸಂಘ ನಿ. ಹುಲಿಯೂರುದುರ್ಗ ಕುಣಿಗಲ್ ತಾ|| ಇದರ ವಿಚಾರಣಾಧಿಕಾರಿಯವರ ವರದಿ ದಿನಾಂಕ: 19-5-2012

**ಪ್ರಸ್ತಾವನೆ:-**

ಶ್ರೀ ಎಂ.ರಸೂಲ್ ಖಾನ್ ಬಿನ್ ಮಯೂದ್ದೀನ್ ಖಾನ್ ಮತ್ತು ಶ್ರೀಮತಿಎಚ್.ಪಿ.ಜಯಲಕ್ಷ್ಮಿ ಇವರು 2009-10 ನೇ ಸಾಲಿನಲ್ಲಿ ಮಾಜಿ ಅಧ್ಯಕ್ಷರು, ಹಾಗೂ ಮಾಜಿ ಕಾರ್ಯದರ್ಶಿಯಾಗಿ ಕೆಲಸ ನಿರ್ವಹಿಸಿರುತ್ತಾರೆ. 2009-10 ನೇ ಸಾಲಿನ ಲೆಕ್ಕಪರಿಶೋಧನಾ ವರದಿ ಹಾಗೂ ಉಲ್ಲೇಖ(2) ರ ಸಹಕಾರ ಕಾಯಿದೆ ಕಲಂ 64 ರ ವರದಿಯ ರೀತ್ಯಾ 2,96,846=00 ರೂ ಗಳ ಹಣದುರುಪಯೋಗ ಮಾಡಿರುವುದು ಕಂಡುಬಂದಿರುತ್ತದೆ.

ಸದರಿ ಹಣದುರುಪಯೋಗದ ಹಣದ ವಸೂಲಾತಿಗಾಗಿ ಸಂಘದ ಕಾರ್ಯದರ್ಶಿಯು ಈ ಕಛೇರಿಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 69 ರ ರೀತ್ಯಾ ದಿ:3-5-2012 ರಂದು ಅಧಿಭಾರ ಅರ್ಜಿ ದಾಖಲು ಮಾಡಿರುತ್ತಾರೆ.

ಉಲ್ಲೇಖ (1) ಅರ್ಜಿಯಲ್ಲಿ ಸಂಘದ ಕಾರ್ಯದರ್ಶಿಯು ಲಿಖಿತ ಹೇಳಿಕೆ ಸಲ್ಲಿಸಿ ಹಣದುರುಪಯೋಗದ ಮೊತ್ತ ರೂ.2,96,846=00 ಗಳ ವಸೂಲಿ ಕುರಿತು ಹಣದ ಭದ್ರತೆಗಾಗಿ ದಾವೆಯ ಅಂತಿಮ ಫಲಿತಾಂಶವನ್ನು ಕಾಯ್ದಿರಿಸಿ, ಸಂಘದ ದಿ:12–4–2012 ರಂದು ನಡೆಸಿದ ಆಡಳಿತ ಮಂಡಳಿ ಸಭೆಯ ನಡವಳಿಯ ರೀತ್ಯಾ ಪ್ರತಿವಾದಿ–2 /ಮಾಜಿ ಅಧ್ಯಕ್ಷರು ಶ್ರೀ ಎಂ.ರಸೂಲ್ ಖಾನ್ ಬಿನ್ ಮಯೊದ್ದೀನ್ ಖಾನ್ ಇವರು ಹೊಂದಿರುವ ಸ್ಥಿರಾಸ್ತಿಯನ್ನು ಸಹಕಾರಿ ಕಾಯಿದೆ 1959 ಕಲಂ 103 ರಡಿಯಲ್ಲಿ ತೀರ್ಪು ಪೂರ್ವ ಜಪ್ತಿ ಆದೇಶ ನೀಡಬೇಕಾಗಿ ಕೋರಿರುತ್ತಾರೆ. ಆದ್ದರಿಂದ ಈ ನ್ಯಾಯಾಲಯವು ವಿಚಾರಣೆಗಾಗಿರುವ ಅಧಿಭಾರ ಅರ್ಜಿ ಸಂಖ್ಯೆ: 01/2012–13 ರ ಅಂತಿಮ ತೀರ್ಪು ಕಾಯ್ದಿರಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 103 ರನ್ವಯ ಈ ನ್ಯಾಯಾಲಯದಲ್ಲಿರುವ ತೀರ್ಪು ಪೂರ್ವ, ಷೆಡ್ಯೂಲ್ ನಲ್ಲಿನ ಸ್ಥಿರಾಸ್ಥಿಗಳನ್ನು ಆದೇಶ ಪೂರ್ವ ಜಪ್ತಿ ಮಾಡಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:ಸನಿ–32/ದಾವಾ/ಕಲಂ 103/ 01 /2012–13, ದಿನಾಂಕ: 02–06–2012**

ಕೆ. ಗೋಪಾಲರೆಡ್ಡಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು,ತುಮಕೂರು ಉಪವಿಭಾಗ, ತುಮಕೂರು. ಆದ ನಾನು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ/139/ಸಿಎಲ್ಎಂ/2010, ದಿನಾಂಕ:17–2–2011ರ ರೀತ್ಯಾ ದತ್ತವಾಗಿರುವ ಕರ್ನಾಟಕ ಸಹಕಾರ ಕಾಯ್ದೆ 1959 ರ ಕಲಂ 103 ರ ಪ್ರಕಾರ ಅಧಿಕಾರವನ್ನು ಚಲಾಯಿಸುತ್ತಾ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಶ್ರೀ ಎಂ.ರಸೂಲ್‌ಖಾನ್, ಮಾಜಿ ಅಧ್ಯಕ್ಷರು, ಇಂದಾದ್ ಅಲ್ಪಸಂಖ್ಯಾತರರ ಪತ್ತಿನ ಸಹಕಾರ ಸಂಘ ನಿ. ಹುಲಿಯೂರುದುರ್ಗ ಕುಣಿಗಲ್ ತಾ॥, ಇವರ ಹೆಸರಲ್ಲಿ ಷೆಡ್ಯೂಲ್ ರೀತ್ಯಾ ಇರುವ ಸ್ಥಿರಾಸ್ಥಿಯನ್ನು, ಈ ನ್ಯಾಯಾಲಯದಲ್ಲಿ ಇರುವ ದಾವೆಯ ಅಂತಿಮ ಆದೇಶಕ್ಕೆ ಕಾಯ್ದಿರಿಸಿ, ಈ ಆದೇಶ ಪೂರ್ವ ಜಪ್ತಿ ಆದೇಶ ಹೊರಡಿಸಿರುತ್ತೇನೆ.

ಇವರು, ಈ ನ್ಯಾಯಾಲಯದ ಮುಂದಿನ ಆದೇಶ ನೀಡುವವರೆಗೂ ಅಥವಾ ಸ್ವತ್ತುಗಳಿಗೆ ತತ್ಸಮಾನ ನಗದು ಭದ್ರತೆ ನೀಡುವವರೆಗೂ ವಿಲೇವಾರಿ ಮಾಡುವುದಾಗಲೀ, ಪರಭಾರೆ ಮಾಡುವುದಾಗಲೀ ಅಥವಾ ವರ್ಗಾಯಿಸುವುದಾಗಲೀ ಮಾಡುವಂತಿಲ್ಲ. ಒಂದು ವೇಳೆ ಈ ಆದೇಶವನ್ನು ನಿರ್ಲಕ್ಷ್ಯ ಮಾಡಿ ಈ ಸ್ವತ್ತನ್ನು ಕೊಂಡಲ್ಲಿ ಅಥವಾ ಇನ್ನಾವುದೇ ವಿಧದಲ್ಲಿ ವರ್ಗಾಯಿಸಿಕೊಂಡಲ್ಲಿ ಅದು ಸಿಂಧುವಾಗುವುದಿಲ್ಲ (ಸಕ್ರಮವಾಗುವುದಿಲ್ಲ) ಎಂದು ಈ ಮೂಲಕ ಸಾರ್ವಜನಿಕರ ಗಮನಕ್ಕೆ ತರಲಾಗಿದೆ.

ದುರುಪಯೋಗದಾರರ ಈ ಜಪ್ತಿ ಆದೇಶದ ವ್ಯಾಪ್ತಿಯಿಂದ ಹೊರಬರಲು ಇಚ್ಛಿಸಿದಲ್ಲಿ ಜಪ್ತಿಗೊಳಸಲ್ಪಟ್ಟ ಮೌಲ್ಯಕ್ಕೆ ತಕ್ಕಷ್ಟು ಮತ್ತು ನ್ಯಾಯಾಲಯವು ಸರಿ ಎಂದು ಭಾವಿಸುವ ತಕ್ಕಷ್ಟು ನಗದು ಭದ್ರತೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು. ಇವರ ಹೆಸರಲ್ಲಿ ತುಮಕೂರು ಜಿಲ್ಲಾ ಕೇಂದ್ರ ಬ್ಯಾಂಕ್ ನಿಯಮಿತ, ತುಮಕೂರು, ಕೇಂದ್ರ ಕಛೇರಿ. ಈ ಬ್ಯಾಂಕಿನ ಅಮಾನತ್ ಖಾತೆಯಲ್ಲಿ ತೊಡಗಿಸಿ ಈ ಬಗ್ಗೆ ಮೂಲ ಚಲನ್ ಪ್ರತಿಯನ್ನು ಈ ಪತ್ರ ತಲುಪಿದ 30 ದಿನದೊಳಗಾಗಿ ಅಥವಾ ಅದಕ್ಕಿಂತ ಮುಂಚಿತವಾಗಿ ನ್ಯಾಯಾಲಯಕ್ಕೆ ಹಾಜರು ಪಡಿಸುವುದರ ಮೂಲಕ ಈ ಜಪ್ತಿ ಆದೇಶದಿಂದ ಹೊರಗುಳಿಯಬಹುದೆಂದು ಸಹ ತಿಳಿಸಲಾಗಿದೆ. ಸದರಿ ನಿಗಧಿತ ಅವಧಿಯೊಳಗೆ ನಗದು ಭದ್ರತೆ ನೀಡಲು ಪ್ರತಿವಾದಿಗಳು ವಿಫಲರಾದಲ್ಲಿ ಈ ಷರತ್ತು ಪೂರ್ವಕ ಜಪ್ತಿ ಆದೇಶ ಸ್ಥಿರಗೊಳ್ಳುವುದಲ್ಲದೇ ಖಾಯಂಗೊಳ್ಳುವುದು ಎಂದು ತಿಳಿಯತಕ್ಕದ್ದು.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ದಿನಾಂಕ:02–6–2012 ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಿರುತ್ತೇನೆ. ಮುಂದಿನ ವಿಚಾರಣೆಯನ್ನು ದಿ:16/6/2012 ರಂದು ಬೆಳಿಗ್ಗೆ 11–00 ಗಂಟೆಗೆ ಮುಂದೂಡಿದೆ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು,**
**ತುಮಕೂರು ಉಪವಿಭಾಗ, ತುಮಕೂರು**

**ಷೆಡ್ಯೂಲ್ ರೀತ್ಯಾ ಸ್ವತ್ತಿನ ವಿವರ**

| ಕ್ರ.ಸಂ. | ಖಾತೆದಾರರು/ಹಕ್ಕುದಾರರ ಹೆಸರು ಮತ್ತು ವಿಳಾಸ | ಖಾತೆ ಸಂ. | ವಿಸ್ತೀರ್ಣ | ಚಕ್ಕುಬಂದಿ |
|---|---|---|---|---|
| 1. | ಎಂ.ರಸೂಲ್ ಖಾನ್, ಬಿನ್ ಮೊಹಿದ್ದೀನ್ ಖಾನ್<br>ಹುಲಿಯೂರುದುರ್ಗ ಗ್ರಾಮ ಪಂಚಾಯ್ತಿ<br>ಕುಣಿಗಲ್ ತಾ॥ | 1297/721/13 | 16*40 ಅಡಿಗಳು<br>ಆರ್‌ಸಿಸಿ ಮನೆ | ಪೂರ್ವ–ಎಂ.ರಸೂಲ್ ಖಾನ್ ರವರ ಮನೆ<br>ಪಶ್ಚಿಮ–ನಾಜಿಮಾ ಉನ್ನಿಸ್‌ರವರ ಪಾಳು<br>ಉತ್ತರ– ರಸ್ತೆ<br>ದಕ್ಷಿಣ– ಗಲ್ಲಿ |

ಪಿ.ಆರ್. 847

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ. ಇವರ ನ್ಯಾಯಾಲಯದಲ್ಲಿ**

**ಪ್ರಕರಣ ಸಂ: ಇಎಕ್ಸ್‌ಇ/ಚಿಪುರ/ಡಿಟಿಸಿಆರ್/356/2011-12, ದಿನಾಂಕ: 25/05/2012**

**ಉಪಸ್ಥಿತರು:– ಎನ್. ಚಂದ್ರಶೇಖರ,** ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ.

| **ಪಿರ್ಯಾದುದಾರರು:–** | **ವಿರುದ್ದ** | **ಆರೋಪಿ:–** |
|---|---|---|
| ಅಬಕಾರಿ ಉಪ ನಿರೀಕ್ಷಕರು–2, ಗೌರಿಬಿದನೂರು ವಲಯ, ಗೌರಿಬಿದನೂರು. | | ಶಂಕರ್ ಬಿನ್ ಮುನಿಸ್ವಾಮಿ, ಸುಮಂಗಳಿ ಬಡಾವಣೆ, ಗೌರಿಬಿದನೂರು ಟೌನ್. |

**ಪ್ರಕರಣದ ಮುಖ್ಯಾಂಶಗಳು:–**

ಅಬಕಾರಿ ಉಪ ಅಧೀಕ್ಷಕರು (ಹೆ.ಪ್ರ.) ಚಿಕ್ಕಬಳ್ಳಾಪುರ ಉಪ ವಿಭಾಗ ರವರ ನಿರ್ದೇಶನದಂತೆ ಹಾಗೂ ಗೌರಿಬಿದನೂರು ವಲಯದ ಅಬಕಾರಿ ನಿರೀಕ್ಷಕರು ಉಪ ನಿರೀಕ್ಷಕರು–1 ಹಾಗೂ ಸಿಬ್ಬಂದಿಯೊಂದಿಗೆ ಸರ್ಕಾರಿ ವಾಹನ ಸಂ:ಕೆಎ–07 ಜಿ–279 ರ ವಾಹನದಲ್ಲಿ ದಿನಾಂಕ:21/02/2012 ರಂದು ಸಾಯಂಕಾಲ 5–30 ಗಂಟೆ ಸಮಯದಲ್ಲಿ ಗೌರಿಬಿದನೂರು ತಾಲ್ಲೂಕು ವಿದುರಾಶ್ವತ್ಥದಿಂದ ಮೇಳ್ಯಾ ರಸ್ತೆಯ ಯರ್ರನಹಳ್ಳಿ ಗ್ರಾಮದ ರಸ್ತೆಯ ತಿರುವಿನಲ್ಲಿ (ವೃತ್ತ) ಗಸ್ತು ಕಾರ್ಯ ಮಾಡುತ್ತಿದ್ದಾಗ ಬಂದ ಖಚಿತ ವರ್ತಮಾನದ ಮೇರೆಗೆ ಅಕ್ರಮ ಸೇಂದಿ ಶೇಖರಣೆ ಹಾಗೂ ಸಾಗಾಣಿಕೆ ಮಾಡುತ್ತಿರುವ ಬಗ್ಗೆ ವಿಷಯವನ್ನು ಸ್ಥಳದಲ್ಲಿ ಇದ್ದ ವ್ಯಕ್ತಿಗಳಿಗೆ ತಿಳಿಸಿ ಪಂಚರಾಗಿ ಸಹಕರಿಸಬೇಕೆಂದು ಕೇಳಿಕೊಂಡಾಗ ಸದರಿ ವ್ಯಕ್ತಿಗಳು ಒಪ್ಪಿಕೊಂಡ ನಂತರ ಮೇಲ್ಕಂಡ ಸ್ಥಳದಲ್ಲಿ ರಸ್ತೆಕಾವಲು ಕಾರ್ಯ ನಡೆಸುತ್ತಿದ್ದಾಗ ಒಬ್ಬ ಆಸಾಮಿ ದ್ವಿಚಕ್ರ ವಾಹನದಲ್ಲಿ ಮೇಳ್ಯಾದ ಕಡೆಯಿಂದ ಬರುತ್ತಿದ್ದು, ಸರ್ಕಾರಿ ವಾಹನ ನೋಡುತ್ತಿದ್ದಂತೆಯೇ ಆತನು ಗಾಬರಿಯಿಂದ ತನ್ನ ವಾಹನವನ್ನು ಚಾಲನೆ ಮಾಡಿಕೊಂಡು ಬರುತ್ತಿದ್ದು, ಆಸಾಮಿಯೂ ಸಿಬ್ಬಂದಿಯು ನಿಂತಿದ್ದ ಸ್ಥಳಕ್ಕೆ ಬರುತ್ತಿದ್ದಂತೆ ಆತನನ್ನು ಸಿಬ್ಬಂದಿಯು ತಡೆದು ನಿಲ್ಲಿಸಿ ದ್ವಿಚಕ್ರ ವಾಹನ ತಪಾಸಣೆ ಮಾಡಲು ಕಾಲಾವಕಾಶದ ತೊಂದರೆಯಿಂದ "ಸರ್ಚ್ ವಾರೆಂಟ್" ಪಡೆಯಲು ಸಾಧ್ಯವಿಲ್ಲವೆಂದು ತಿಳಿಸಿ, ಸ್ಥಳದಲ್ಲಿಯೇ "ರೆಕಾರ್ಡ್ ಆಫ್ ರೀಸನ್" ಕ್ರಮದೊಂದಿಗೆ ವಾಹನವನ್ನು ಪರಿಶೀಲಿಸಲಾಗಿ ವಾಹನದ ಸೀಟು ಮತ್ತು ಹ್ಯಾಂಡಲ್ ಮಧ್ಯಭಾಗದಲ್ಲಿ ಸುಮಾರು 20 ಲೀಟರ್‌ನಷ್ಟು ಬಿಳಿಯ ಬಣ್ಣದ ಪ್ಲಾಸ್ಟಿಕ್ ಕ್ಯಾನ್ ಕಂಡು ಬಂತು. ಸದರಿ ಆಸಾಮಿಗೆ ಇದು ಏನು ಎಂದು ಕೇಳಿದಾಗ ತಡಬಡಾಯಿಸಿದ್ದು, ಆಗ ಇಲಾಖೆಯ ಸಿಬ್ಬಂದಿಯು ಕ್ಯಾನ್‌ನ ಮುಚ್ಚಳವನ್ನು ಬಿಚ್ಚಿ ನೋಡಲಾಗಿ ಕ್ಯಾನ್‌ನ ಒಳಗೆ ಕೆಟ್ಟ ಹಾಗೂ ಹುಳಿಯ ವಾಸನೆಯಿಂದ ಕೂಡಿದ ಬಿಳಿಯ ಬಣ್ಣದ ದ್ರಾವಣ ಕಂಡುಬಂದಿತು ಇದು ಸೇಂದಿ ಎಂದು ಖಚಿತಪಡಿಸಿಕೊಂಡು ಎಲ್ಲಿಂದ ಏತಕ್ಕಾಗಿ ತಂದಿರುವೆ ಎಂದು ಕೇಳಲಾಗಿ ಸದರಿ ಆಸಾಮಿಯು ಆಂಧ್ರದಿಂದ ತಂದಿದ್ದು, ಮತ್ತು ಇದನ್ನು ಕರ್ನಾಟಕದಲ್ಲಿ ಮಾರಾಟ ಮಾಡಲು ಉದ್ದೇಶಿಸಿರುವುದಾಗಿ ತಿಳಿಸಿದ್ದು, ನಂತರ ಆಸಾಮಿಯ ಹೆಸರು ಮತ್ತು ವಿಳಾಸವನ್ನು ಕೇಳಲಾಗಿ ಆತನು ಶಂಕರ್ ಬಿನ್ ಮುನಿಸ್ವಾಮಿ, ಸುಮಂಗಲಿ ಬಡಾವಣೆ, ಗೌರಿಬಿದನೂರು ಟೌನ್ ಎಂದು ತಿಳಿಸಿದ್ದು, ಸೇಂದಿ ಸಾಗಾಣಿಕೆಗೆ ದಾಖಲಾತಿಗಳು ಇದೆಯೇ ಎಂದು ಕೇಳಲಾಗಿ ಯಾವುದೇ ದಾಖಲಾತಿಗಳು ಇಲ್ಲ ಎಂದು ತಿಳಿಸಿದ್ದು, ಸದರಿ ಕ್ಯಾನ್‌ನಲ್ಲಿದ್ದ ಸೇಂದಿಯಿಂದ 500 ಮಿಲಿಯ ಒಂದು ಪ್ಲಾಸ್ಟಿಕ್ ಬಾಟಲಿನಲ್ಲಿ ರಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆದು ಆ ಬಾಟಲಿಯ ಬಾಯಿಗೆ ಮುಚ್ಚಳ ಹಾಕಿ ಬಿಳಿ ಬಟ್ಟೆ ಸುತ್ತಿ ದಾರದಿಂದ ಕಟ್ಟಿ ಇಲಾಖಾ ಸೀಲಿನಿಂದ ಮೊಹರು ಮಾಡಿ ನಂತರ ಚೀಟಿಯಲ್ಲಿ ಪಂಚರ ಸಹಿ ಪಡೆದು ಮಾದರಿ ಬಾಟಲಿಗೆ ಅಂಟಿಸಿ, ನಕಲನ್ನು ಪಂಚರಿಗೆ ನೀಡಿ ನಂತರ ವಾಹನವನ್ನು ಪರಿಶೀಲಿಸಲಾಗಿ ಅದು ಹಸಿರು ಬಣ್ಣದ ಟಿವಿಎಸ್ ಸೂಪರ್ ಎಕ್ಸ್‌ಎಲ್ ಹೆವಿಡ್ಯುಟಿ ವಾಹನವಾಗಿದ್ದು, ಇದರ ನೊಂದಣಿ ಸಂ:ಕೆಎ–40 ಕ್ಯೂ–9513, ಚಾಸೀಸ್ ಸಂ:ಎಂಡಿ621ಬಿಡಿ19ಬಿ2ಎಫ್51209, ಇಂಜಿನ್ ಸಂ:ಒಡಿಐಎಫ್‌ಬಿ1354233 ಆಗಿರುತ್ತದೆ. ನಂತರ ಆರೋಪಿಯನ್ನು ದಸ್ತಗಿರಿಪಡಿಸಿಕೊಂಡು ವಾಹನ ಮತ್ತು ಸೇಂದಿಯನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಈ ಕೃತ್ಯವು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 11, 13 ಮತ್ತು 14, 15 ರಂತೆ ಹಾಗೂ ಇದೇ ಕಾಯ್ದೆ ಕಲಂ 32(1), 34, 38(ಎ) ಮತ್ತು 43 ಶಿಕ್ಷಾರ್ಹ ಅಪರಾಧವಾಗಿರುವುದರಿಂದ ಈ ಬಗ್ಗೆ ತಕ್ಷೀರು ಸಂ:08/2011–12, ದಿನಾಂಕ:21/02/2012 ರಲ್ಲಿ ಮೊಕದ್ದಮೆ ದಾಖಲಿಸಿಕೊಂಡು ಆರೋಪಿಯನ್ನು ಪ್ರಥಮ ಮಾಹಿತಿ ವರದಿಯೊಂದಿಗೆ ನ್ಯಾಯಾಲಯದ ಮುಂದೆ ಹಾಜರುಪಡಿಸಿ, ತದನಂತರ ಪ್ರ.ಮಾ.ವ. ಮಹಜರ್ ಪ್ರತಿಯೊಂದಿಗೆ ಹಾಗೂ ಪಿ.ಎಫ್‌ನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿ ಸೇಂದಿ ಮತ್ತು ವಾಹನವನ್ನು ಗೌರಿಬಿದನೂರು ವಲಯದ ಅಬಕಾರಿ ನಿರೀಕ್ಷಕರ ವಶಕ್ಕೆ ಹಸ್ತಾಂತರಿಸಲು ಅನುಮತಿ ನೀಡಬೇಕೆಂದು ಕೋರಿರುತ್ತಾರೆ.

ಅದರಂತೆ ಸೇಂದಿ ಮತ್ತು ವಾಹನವನ್ನು ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ಇವರ ವಶಕ್ಕೆ ಹಸ್ತಾಂತರಿಸಲು ಈ ಪ್ರಾಧಿಕಾರದಿಂದ ದಿನಾಂಕ:22/02/2012 ರಂದು ಅನುಮತಿ ನೀಡಲಾಗಿದೆ.

ತನಿಖಾಧಿಕಾರಿಗಳು ತನಿಖೆಯನ್ನು ಮುಂದುವರೆಸಿ ಜಪ್ತುಪಡಿಸಿದ ಸೇಂದಿಯಿಂದ ತೆಗೆಯಲಾದ ಮಾದರಿಯನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಕೇಂದ್ರ ರಾಸಾಯನಿಕ ಪ್ರಯೋಗಾಲಯ, ಅಬಕಾರಿ ಇಲಾಖೆ, ಬೆಂಗಳೂರು ಇವರಿಗೆ ಸಲ್ಲಿಸಿದ್ದು, ತಜ್ಞರ ವರದಿ ಸಂ:ಸಿಸಿಎಲ್:1493/2012, ದಿನಾಂಕ:12/03/2012 ರ ಪತ್ರದಂತೆ ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಲಾದ ಮಾದರಿಯಲ್ಲಿ ಮದ್ಯಸಾರದ ಅಂಶ 3.35% ವಿ.ವಿ. ಇದ್ದು, ಇದರಲ್ಲಿ ಈಥೈಲ್ ಅಲ್ಕೋಹಾಲ್ ಮತ್ತು ಕ್ಲೋರಲ್ ಹೈಡ್ರೇಟ್ ಅಂಶ ಕಂಡುಬಂದಿದ್ದು, ಇದು ಮಾನವನ ಸೇವನೆಗೆ ಯೋಗ್ಯವಾಗಿರುವುದಿಲ್ಲ ಎಂದು ತಜ್ಞರು ಅಭಿಪ್ರಾಯ ನೀಡಿದ್ದು, ತಜ್ಞರ ವರದಿಯ ಪ್ರತಿಯನ್ನು ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ರವರ ಪತ್ರ ದಿನಾಂಕ:20/04/2012 ರೊಂದಿಗೆ ಲಗತ್ತಿಸಿ ಈ ಮೊಕದ್ದಮೆಯಲ್ಲಿ ಜಪ್ತುಪಡಿಸಲಾದ 20 ಲೀ. ಸೇಂದಿಯನ್ನು ಸರ್ಕಾರಕ್ಕೆ ಮುಟ್ಟುಗೋಲು

ಹಾಕಿಕೊಳ್ಳಲು ತನಿಖಾಧಿಕಾರಿಗಳು ವರದಿ ಸಲ್ಲಿಸಿದ್ದು, ಅದರಂತೆ **ಟಿವಿಎಸ್ ಸೂಪರ್ ಎಕ್ಸ್‌ಎಲ್ ಹೆವಿಡ್ಯುಟಿ ನೊಂದಣಿ ಸಂ:ಕೆಎ–40 ಕ್ಯೂ–9513** ರ ವಾಹನ ಹೊರತುಪಡಿಸಿ ಪ್ರಕರಣ ತನಿಖೆ ಕಾಯ್ದಿರಿಸಿ 20 ಲೀ. ಸೇಂದಿಯನ್ನು ದಿನಾಂಕ: 27/04/2012 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮಾದರಿ ಹೊರತುಪಡಿಸಿ ಉಳಿದ ಸೇಂದಿಯನ್ನು ನಿಯಮಾನುಸಾರ ನಾಶಪಡಿಸಲು ಪ್ರಾಧಿಕಾರದಿಂದ ಆದೇಶಿಸಲಾಗಿತ್ತು.

ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ರವರು ತನಿಖೆಯನ್ನು ಮುಂದುವರೆಸಿ ಪ್ರಕರಣದಲ್ಲಿ ಜಪ್ತು ಮಾಡಿರುವ ಟಿವಿಎಸ್ ಸೂಪರ್ ಎಕ್ಸ್‌ಎಲ್ ಹೆವಿಡ್ಯುಟಿ ನೊಂದಣಿ ಸಂ:ಕೆಎ–40 ಕ್ಯೂ–9513 ರ ಮಾಲೀಕರ ಬಗ್ಗೆ ಸಂಬಂಧಿಸಿದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ 'ಬಿ' ರಿಜಿಸ್ಟರ್ ಎಕ್ಸ್‌ಟ್ರ್ಯಾಕ್ಟ್ ಪಡೆದು ಈ ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಸದರಿ 'ಬಿ' ರಿಜಿಸ್ಟರ್ ಎಕ್ಸ್‌ಟ್ರ್ಯಾಕ್ಟ್ ಪ್ರಕಾರ ಶ್ರೀ ಬಾಬು ಬಿನ್ ಕ್ರಿಷ್ಣ ಸಿಂಗ್, ಸುಮಂಗಳಿ ಬಡಾವಣೆ, ಹಿರೇಬಿದನೂರು, ಗೌರಿಬಿದನೂರು ತಾಲ್ಲೂಕು ಚಿಕ್ಕಬಳ್ಳಾಪುರ ಜಿಲ್ಲೆ ಎಂದು ವರದಿಯ ಮೇರೆಗೆ ಸದರಿ ನೊಂದಣಿ ಮಾಲೀಕರಿಗೆ / ಆರೋಪಿಗೆ ಈ ಪ್ರಾಧಿಕಾರದಿಂದ ದಿನಾಂಕ:11/04/2012 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಬಿ) ರೀತ್ಯಾ ಕಾರಣ ಕೇಳಿ ನೋಟೀಸ್‌ನ್ನು ಆರ್.ಪಿ.ಎ.ಡಿ. ಮೂಲಕ ರವಾನಿಸಿದ್ದು, ನೋಟೀಸ್ ಜಾರಿಯಾಗದೇ ಈ ಪ್ರಾಧಿಕಾರಕ್ಕೆ ವಾಪಸ್ಸು ಬಂದಿರುತ್ತದೆ. ಸದರಿ ನೋಟೀಸ್‌ನ್ನು ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ಇವರಿಗೆ ಜಾರಿ ಮಾಡಲು ನಿರ್ದೇಶನ ನೀಡಿದ್ದು, ಅದರಂತೆ ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ಇವರು ನೋಟೀಸ್‌ನ್ನು ಆರೋಪಿಗೆ ದಿನಾಂಕ:12/04/2012 ರಂದು ಮತ್ತು ಮಾಲೀಕರಿಗೆ ದಿನಾಂಕ:18/04/2012 ರಂದು ಜಾರಿ ಮಾಡಿ ಸ್ವೀಕೃತಿಯನ್ನು ಪಡೆದು ಈ ಪ್ರಾಧಿಕಾರಕ್ಕೆ ದಿನಾಂಕ: 27/04/2012 ರ ಪತ್ರದಲ್ಲಿ ಸಲ್ಲಿಸಿರುತ್ತಾರೆ. ಅಲ್ಲದೇ ವಾಹನ ಜಪ್ತಾಗಿ ಸುಮಾರು 3 ತಿಂಗಳು ಕಳೆದರೂ ವಲಯ ಕಛೇರಿಗೆ ವಾಹನದ ಬಗ್ಗೆ ಹಕ್ಕು ಚಲಾಯಿಸಿ ಮೂಲ ದಾಖಲಾತಿಗಳೊಂದಿಗೆ ಯಾರೂ ಹಾಜರಾಗಿರುವುದಿಲ್ಲ. ಆದಕಾರಣ ವಾಹನವನ್ನು ಹೀಗೆ ಉಳಿಸಿಕೊಂಡಲ್ಲಿ ಅದರ ಮೌಲ್ಯ ಕಡಿಮೆಯಾಗಿ ಸರ್ಕಾರದ ರಾಜಸ್ವಕ್ಕೆ ದಕ್ಕೆಯಾಗುತ್ತದೆ. ಆದಕಾರಣ ವಾರಸುದಾರರು ಬಾರದೇ ಇರುವುದರಿಂದ ಸದರಿ ಟಿವಿಎಸ್ ಸೂಪರ್ ಎಕ್ಸ್‌ಎಲ್ ಹೆವಿಡ್ಯುಟಿ ನೊಂದಣಿ ಸಂ:ಕೆಎ–40 ಕ್ಯೂ–9513 ರ ದ್ವಿಚಕ್ರ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ.

ದಿನಾಂಕ:25/05/2012 ರಂದು ಪ್ರಕರಣವನ್ನು ಪ್ರಾಧಿಕಾರದಲ್ಲಿ ವಿಚಾರಣೆಗೆ ತೆಗೆದುಕೊಳ್ಳಲಾಗಿ ವಾಹನ ಮಾಲೀಕತ್ವ ಹೊಂದಿರುವವರು ಈ ಪ್ರಾಧಿಕಾರದ ಮುಂದೆ ಇಲ್ಲಿಯತನಕ ಯಾರೂ ಹಾಜರಾಗಿರುವುದಿಲ್ಲ. ದಾಖಲೆಗಳು, ಪ್ರ.ಮಾ.ವ. ಮಹಜರ್‌ನ್ನು ಪರಿಶೀಲಿಸಲಾಗಿ ಅಬಕಾರಿ ಉಪ ನಿರೀಕ್ಷಕರು–2, ಗೌರಿಬಿದನೂರು ವಲಯ, ಗೌರಿಬಿದನೂರು ರವರು ದಿನಾಂಕ:21/02/2012 ರಂದು ಗೌರಿಬಿದನೂರು ತಾಲ್ಲೂಕು ವಿದುರಾಶ್ವತ್ಥದಿಂದ ಮೇಳ್ಯಾ ರಸ್ತೆಯ ಯರ್ರೇನಹಳ್ಳಿ ಗ್ರಾಮದ ರಸ್ತೆಯ ಬಳಿ ರಸ್ತೆಕಾವಲು ಮಾಡುತ್ತಿದ್ದಾಗ ಟಿವಿಎಸ್ ಸೂಪರ್ ಎಕ್ಸ್‌ಎಲ್ ಹೆವಿಡ್ಯುಟಿ ನೊಂದಣಿ ಸಂ:ಕೆಎ–40 ಕ್ಯೂ–9513 ರ ದ್ವಿಚಕ್ರ ವಾಹನದಲ್ಲಿ 20 ಲೀ. ಸೇಂದಿಯನ್ನು ಹೊಂದಿ ಸಾಗಾಣಿಕೆ ಮಾಡುವ ಸಮಯದಲ್ಲಿ ಜಪ್ತುಪಡಿಸಿರುವುದು ಸಾಬೀತಾಗಿರುತ್ತದೆ. ಅಲ್ಲದೆ ರಾಸಾಯನಿಕ ತಜ್ಞರ ವರದಿಯನ್ವಯ ಜಪ್ತುಪಡಿಸಿರುವ ಸೇಂದಿಯಲ್ಲಿ ಈಥೈಲ್ ಆಲ್ಕೋಹಾಲ್ ಮತ್ತು ಕ್ಲೋರೈಡ್ ಅಂಶ ಕಂಡು ಬಂದಿರುವುದರಿಂದ ಈ ವಾಹನವನ್ನು ಅಬಕಾರಿ ವಸ್ತುಗಳ ಅಕ್ರಮ ಸಾಗಾಣಿಕೆಗೆ ಉಪಯೋಗಿಸಿರುವುದು ಸಾಬೀತಾಗಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶ.

## ಆದೇಶ

ಎನ್. ಚಂದ್ರಶೇಖರ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿ ಕ್ರಮ ಜರುಗಿಸಲಾಗಿದ್ದು, ಅಬಕಾರಿ ಉಪ ನಿರೀಕ್ಷಕರು–2, ಗೌರಿಬಿದನೂರು ವಲಯ, ಗೌರಿಬಿದನೂರು ರವರ ದಿನಾಂಕ:21/02/2012 ರ ಪ್ರ.ಮಾ.ವ.ಸಂ:08/2012 ರಲ್ಲಿ ಜಪ್ತುಪಡಿಸಿರುವ ಟಿವಿಎಸ್ ಸೂಪರ್ ಎಕ್ಸ್‌ಎಲ್ ಹೆವಿಡ್ಯುಟಿ ನೊಂದಣಿ ಸಂ:ಕೆಎ–40 ಕ್ಯೂ–9513 ರ ಇಂಜಿನ್ ನಂ:ಒಡಿ1ಎಫ್ಬಿ1354233, ಚಾಸೀಸ್ ನಂ:ಎಚಿಡಿ621ಬಿಡಿ19ಬಿ2ಎಫ್51289 ರ ದ್ವಿಚಕ್ರ ವಾಹನವನ್ನು ವಾರಸ್ಸುದಾರರಿಲ್ಲದ ವಾಹನವೆಂದು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ವಾಹನಕ್ಕೆ ಸಂಬಂಧಿಸಿದಂತೆ ಈ ಆದೇಶದ ವಿರುದ್ದ ಮೇಲ್ಮನವಿ ಸಲ್ಲಿಸುವುದಾದಲ್ಲಿ ಈ ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸಗಳೊಳಗೆ ಸಲ್ಲಿಸಬಹುದಾಗಿದೆ. ತಪ್ಪಿದ್ದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವನ್ನು ದಿನಾಂಕ:25/05/2012 ರಂದು ಈ ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಿರುತ್ತೇನೆ. ಮೇಲ್ಮನವಿ ಅವಧಿ ಮುಗಿದ ನಂತರ ಕಾನೂನು ರೀತ್ಯಾ ಮೇಲ್ಕಂಡ ವಾಹನವನ್ನು ವಿಲೇವಾರಿ ಮಾಡಲು ಆದೇಶಿಸಿದೆ.

**ಎನ್. ಚಂದ್ರಶೇಖರ,**
ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪಆಯುಕ್ತರು,
ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ.

**ಪಿ.ಆರ್. 862**

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ:ಕಾಇ 32 ಎಲ್‌ಇಟಿ 2012, ಬೆಂಗಳೂರು, ದಿನಾಂಕ:13–07–2012.**

ಸರ್ಕಾರದ ಸಮ ಸಂಖ್ಯೆಯ ದಿನಾಂಕ: 12–04–2012ರ ಅಧಿಸೂಚನೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ಜೇಷ್ಠತೆ) ನಿಯಮಾವಳಿ, 1957ರ ನಿಯಮ 10(2)(ಎ) ಅಡಿಯಲ್ಲಿ ಕಾರ್ಮಿಕ ಇಲಾಖೆಯ ಜಂಟಿ ಕಾರ್ಮಿಕ ಆಯುಕ್ತರುಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ:01–01–2009 ಮತ್ತು 01–01–2010ರಲ್ಲಿರುವಂತೆ ಅನುಬಂಧ–Iರಲ್ಲಿ, ದಿನಾಂಕ: 01–01–2011 ರಲ್ಲಿರುವಂತೆ ಅನುಬಂಧ–II ರಲ್ಲಿ ಹಾಗೂ ದಿನಾಂಕ: 1–1–2012 ರಲ್ಲಿರುವಂತೆ ಅನುಬಂಧ–III ರಲ್ಲಿ ಪ್ರಕಟಿಸಿ ಈ ಸಂಬಂಧ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 30 ದಿನಗಳೊಳಗಾಗಿ ಸರ್ಕಾರದ ಕಾರ್ಯದರ್ಶಿಗಳು, ಕಾರ್ಮಿಕ ಇಲಾಖೆ, ವಿಕಾಸ ಸೌಧ, ಬೆಂಗಳೂರು–1 ಇವರಿಗೆ ಸಲ್ಲಿಸತಕ್ಕದ್ದೆಂದು ಸೂಚಿಸಲಾಗಿತ್ತು. ಸದರಿ ಅಧಿಸೂಚನೆಯು ದಿನಾಂಕ: 10–05–2012ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾಗಿರುತ್ತದೆ. ಈ ಬಗ್ಗೆ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗಿರುವುದಿಲ್ಲ. ಆದ್ದರಿಂದ ಜಂಟಿ ಕಾರ್ಮಿಕ ಆಯುಕ್ತರ ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ಈ ಕೆಳಕಂಡಂತೆ ಪ್ರಕಟಿಸಲಾಗಿದೆ.

**ಅನುಬಂಧ–I**

**(ದಿನಾಂಕ:01.01.2009 ಮತ್ತು 1–1–2010 ರಲ್ಲಿದ್ದಂತೆ ಜಂಟಿ ಕಾರ್ಮಿಕ ಆಯುಕ್ತರುಗಳ ಜೇಷ್ಠತಾ ಪಟ್ಟಿ)**

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಶ್ರೀ/ಶ್ರೀಮತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪದೋನ್ನತಿ ಹೊಂದಿದ ದಿನಾಂಕ |
|---|---|---|---|---|
| 1 | ಹೆಚ್.ಎಸ್.ಉತ್ತಪ್ಪ, | **30–1–51** | **2–4–83** | **30–10–07** |

**ಅನುಬಂಧ–II**

**(ದಿನಾಂಕ: 01.01.2011ರಲ್ಲಿದ್ದಂತೆ ಜಂಟಿ ಕಾರ್ಮಿಕ ಆಯುಕ್ತರುಗಳ ಜೇಷ್ಠತಾ ಪಟ್ಟಿ)**

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಶ್ರೀ/ಶ್ರೀಮತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪದೋನ್ನತಿ ಹೊಂದಿದ ದಿನಾಂಕ |
|---|---|---|---|---|
| 1 | ಹೆಚ್.ಎಸ್.ಉತ್ತಪ್ಪ, | **30–1–51** | **2–4–83** | **30–10–07** |
| 2 | ಜಿ.ಟಿ.ಜಿಂಕಲಪ್ಪ | 18-02-55 | 23-03-91 | 12-05-10 |
| 3 | ಎಸ್.ನರಸಿಂಹಮೂರ್ತಿ | 14-04-62 | 13-08-91 | 12-05-10 |
| 4 | ವಿ.ಎಸ್.ಹಿಟ್ಟಣಗಿ | 25-06-52 | 04-03-80 | 12-05-10 |
| 5 | ಜಿ.ಹೆಚ್.ಕೊಂಗಿ | 21-01-53 | 04-03-80 | 12-05-10 |

**ಅನುಬಂಧ–III**

**(ದಿನಾಂಕ:01.01.2012ರಲ್ಲಿದ್ದಂತೆ ಜಂಟಿ ಕಾರ್ಮಿಕ ಆಯುಕ್ತರುಗಳ ಜೇಷ್ಠತಾ ಪಟ್ಟಿ)**

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಶ್ರೀ/ಶ್ರೀಮತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪದೋನ್ನತಿ ಹೊಂದಿದ ದಿನಾಂಕ |
|---|---|---|---|---|
| 1 | ಜಿ.ಟಿ.ಜಿಂಕಲಪ್ಪ | 18-02-55 | 23-03-91 | 12-05-10 |
| 2 | ಎಸ್.ನರಸಿಂಹಮೂರ್ತಿ | 14-04-62 | 13-08-91 | 12-05-10 |
| 3 | ವಿ.ಎಸ್.ಹಿಟ್ಟಣಗಿ | 25-06-52 | 04-03-80 | 12-05-10 |
| 4 | ಜಿ.ಹೆಚ್.ಕೊಂಗಿ | 21-01-53 | 04-03-80 | 12-05-10 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಯು.ಎನ್.ನಾಗೇಂದ್ರ,**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

**ಪಿ.ಆರ್. 977**

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ:ಕಾಇ 34 ಎಲ್‌ಇಟಿ 2012, ಬೆಂಗಳೂರು, ದಿನಾಂಕ: 13–07–2012.**

ಸರ್ಕಾರದ ಸಮ ಸಂಖ್ಯೆಯ ದಿನಾಂಕ: 10–04–2012ರ ಅಧಿಸೂಚನೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ಜೇಷ್ಠತೆ) ನಿಯಮಾವಳಿಗಳು, 1957ರ ನಿಯಮ 10(2)(ಎ)ರ ಪ್ರಕಾರ ದಿನಾಂಕ:01–01–2011 ಮತ್ತು 01–01–2012ರಲ್ಲಿದ್ದಂತೆ ಕಾರ್ಮಿಕ ಇಲಾಖೆಯ ಅಪರ ಕಾರ್ಮಿಕ ಆಯುಕ್ತರುಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಕ್ರಮವಾಗಿ ಈ ಕೆಳಗಿನ ಅನುಬಂಧ–I ಮತ್ತು II ರಂತೆ ಪ್ರಕಟಿಸಿ ಈ ಸಂಬಂಧ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 30 ದಿನಗಳೊಳಗಾಗಿ ಸರ್ಕಾರದ ಕಾರ್ಯದರ್ಶಿಗಳು, ಕಾರ್ಮಿಕ ಇಲಾಖೆ, ವಿಕಾಸ ಸೌಧ, ಬೆಂಗಳೂರು–1 ಇವರಿಗೆ ಸಲ್ಲಿಸತಕ್ಕದ್ದೆಂದು ಸೂಚಿಸಲಾಗಿತ್ತು. ಸದರಿ ಅಧಿಸೂಚನೆಯು ದಿನಾಂಕ: 10–05–2012ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾಗಿರುತ್ತದೆ. ಈ ಬಗ್ಗೆ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗಿರುವುದಿಲ್ಲ. ಆದ್ದರಿಂದ ಅಪರ ಕಾರ್ಮಿಕ ಆಯುಕ್ತರ ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ಈ ಕೆಳಕಂಡಂತೆ ಪ್ರಕಟಿಸಲಾಗಿದೆ.

**ಅನುಬಂಧ–I**

**(ದಿನಾಂಕ:01.01.2011 ರಲ್ಲಿದ್ದಂತೆ ಅಪರ ಕಾರ್ಮಿಕ ಆಯುಕ್ತರುಗಳ ಅಂತಿಮ ಜೇಷ್ಠತಾ ಪಟ್ಟಿ)**

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಶ್ರೀ/ಶ್ರೀಮತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪದೋನ್ನತಿ ಹೊಂದಿದ ದಿನಾಂಕ |
|---|---|---|---|---|
| 1 | ಎಸ್. ನರಸಿಂಹಯ್ಯ | 15-1-51 | 23-08-74 | 21-7-99 |
| 2 | ಗುರುದಾಸ್ ಎಂ.ಭಟ್ | 13-11-52 | 7-8-78 | 16-7-08 |

**ಅನುಬಂಧ–II**

**(ದಿನಾಂಕ:01.01.2012 ರಲ್ಲಿದ್ದಂತೆ ಅಪರ ಕಾರ್ಮಿಕ ಆಯುಕ್ತರುಗಳ ಅಂತಿಮ ಜೇಷ್ಠತಾ ಪಟ್ಟಿ)**

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಶ್ರೀ/ಶ್ರೀಮತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪದೋನ್ನತಿ ಹೊಂದಿದ ದಿನಾಂಕ |
|---|---|---|---|---|
| 1 | ಗುರುದಾಸ್ ಎಂ.ಭಟ್ | 13-11-52 | 7-8-78 | 16-7-08 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಯು.ಎಸ್.ನಾಗೇಂದ್ರ,**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

**ಪಿ.ಆರ್. 978**

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ–I

**ಸಂಖ್ಯೆ:ಕಾಇ 37 ಎಲ್‌ಇಟಿ 2012, ಬೆಂಗಳೂರು, ದಿನಾಂಕ: 13–07–2012.**

ಸರ್ಕಾರದ ಸಮ ಸಂಖ್ಯೆಯ ದಿನಾಂಕ: 12–04–2012ರ ಅಧಿಸೂಚನೆಯಲ್ಲಿ ಕರ್ನಾಟಕ ನಾಗರೀಕ ಸೇವಾ ಜೇಷ್ಠತೆಯ ನಿಯಮಾವಳಿ 1957ರ ನಿಯಮ 10(2)(ಎ)ರ ಪ್ರಕಾರ ದಿನಾಂಕ: 01–01–2006 ಮತ್ತು 1–1–2007 ರಲ್ಲಿರುವಂತೆ ಅನುಬಂಧ–I ರಲ್ಲಿ ದಿನಾಂಕ:1–1–2008 ರಲ್ಲಿರುವಂತೆ ಅನುಬಂಧ–II ರಲ್ಲಿ ದಿನಾಂಕ: 1–1–2009 ಮತ್ತು 1–1–2010 ರಲ್ಲಿರುವಂತೆ ಅನುಬಂಧ–III ರಲ್ಲಿ ದಿನಾಂಕ:1–1–2011 ರಲ್ಲಿದ್ದಂತೆ ಅನುಬಂಧ–IV ರಲ್ಲಿ 1–1–2012 ರಲ್ಲಿದ್ದಂತೆ ಅನುಬಂಧ–V ರಲ್ಲಿ ಕಾರ್ಮಿಕ ಇಲಾಖೆಯ ಉಪ ಕಾರ್ಮಿಕ ಆಯುಕ್ತರುಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಿ ಈ ಸಂಬಂಧ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 30 ದಿನಗಳೊಳಗಾಗಿ ಸರ್ಕಾರದ ಕಾರ್ಯದರ್ಶಿಗಳು, ಕಾರ್ಮಿಕ ಇಲಾಖೆ, ವಿಕಾಸ ಸೌಧ, ಬೆಂಗಳೂರು–1 ಇವರಿಗೆ ಸಲ್ಲಿಸತಕ್ಕದ್ದೆಂದು ಸೂಚಿಸಲಾಗಿತ್ತು. ಸದರಿ ಅಧಿಸೂಚನೆಯು ದಿನಾಂಕ: 10–05–2012ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾಗಿರುತ್ತದೆ. ಈ ಬಗ್ಗೆ ಸ್ವೀಕೃತವಾದ ಆಕ್ಷೇಪಣೆ/ಸಲಹೆಗಳನ್ನು ಸರ್ಕಾರವು ಪರಿಶೀಲಿಸಿ ಉಪ ಕಾರ್ಮಿಕ ಆಯುಕ್ತರ ಅಂತಿಮ ಜೇಷ್ಠತಾ ಪಟ್ಟಿಯನ್ನು ಈ ಕೆಳಕಂಡಂತೆ ಪ್ರಕಟಿಸಲಾಗಿದೆ.

ಈ ಜೇಷ್ಠತಾ ಪಟ್ಟಿಯು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಬಾಕಿ ಇರುವ ಅರ್ಜಿ ಸಂಖ್ಯೆ:5867–5869/2001 ಹಾಗೂ ಸಂಖ್ಯೆ: 1925–27/07 ರಲ್ಲಿ ನ್ಯಾಯಾಲಯವು ನೀಡುವ ತೀರ್ಮಾನದ ಮೇರೆಗೆ ಪರಿಷ್ಕರಿಸುವ ಷರತ್ತಿಗೆ ಒಳಪಟ್ಟಿದೆ.

**ಅನುಬಂಧ– I**

**ಕಾರ್ಮಿಕ ಇಲಾಖೆಯ ಉಪ ಕಾರ್ಮಿಕ ಆಯುಕ್ತರ ದಿನಾಂಕ:1–1–2006 ಮತ್ತು 1–1–2007ರ ಜೇಷ್ಠತಾ ಪಟ್ಟಿ**

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಶ್ರೀ/ಶ್ರೀಮತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಮುಂಬಡ್ತಿ ಹೊಂದಿದ ದಿನಾಂಕ | ಮುಂಬಡ್ತಿ ಅರ್ಹತಾ ದಿನಾಂಕ |
|---|---|---|---|---|---|
| 1 | ಹೆಚ್.ಎಸ್.ಉತ್ತಪ್ಪ | 30–01–1951 | 02–04–1983 | 02–07–1992 | 02–07–1992 |
| 2 | ಜೆ.ಟಿ.ಜಿಂಕಲಪ್ಪ | 18–02–1955 | 23–03–1991 | 03–12–1999 | 03–12–1999 |
| 3 | ಎಸ್.ನರಸಿಂಹಮೂರ್ತಿ | 14–04–1962 | 13–08–1991 | 03–12–1999 | 03–12–1999 |
| 4 | ವಿ.ಎನ್.ಹಿಟ್ಟಣಗಿ | 25–06–1952 | 04–03–1980 | 19–12–1995 | 03–12–1999 |
| 5 | ಜಿ.ಹೆಚ್.ಕೊಂಗಿ | 21–01–1953 | 04–03–1980 | 19–12–1995 | 03–12–1999 |
| 6 | ಎನ್.ನಂಜುಂಡಪ್ಪ | 25–01–1951 | 15–12–1982 | 19–12–1996 | 03–12–1999 |

**ಅನುಬಂಧ– II**

**ಕಾರ್ಮಿಕ ಇಲಾಖೆಯ ಉಪ ಕಾರ್ಮಿಕ ಆಯುಕ್ತರ ದಿನಾಂಕ: 1–1–2008 ರಲ್ಲಿದ್ದಂತೆ ಜೇಷ್ಠತಾ ಪಟ್ಟಿ.**

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಶ್ರೀ/ಶ್ರೀಮತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಮುಂಬಡ್ತಿ ಹೊಂದಿದ ದಿನಾಂಕ | ಮುಂಬಡ್ತಿ ಅರ್ಹತಾ ದಿನಾಂಕ |
|---|---|---|---|---|---|
| 1 | ಜೆ.ಟಿ.ಜಿಂಕಲಪ್ಪ | 18–02–1955 | 23–03–1991 | 03–12–1999 | 03–12–1999 |
| 2 | ಎಸ್.ನರಸಿಂಹಮೂರ್ತಿ | 14–04–1962 | 13–08–1991 | 03–12–1999 | 03–12–1999 |
| 3 | ವಿ.ಎನ್.ಹಿಟ್ಟಣಗಿ | 25–06–1952 | 04–03–1980 | 19–12–1995 | 03–12–1999 |
| 4 | ಜಿ.ಹೆಚ್.ಕೊಂಗಿ | 21–01–1953 | 04–03–1980 | 19–12–1995 | 03–12–1999 |
| 5 | ಎನ್.ನಂಜುಂಡಪ್ಪ | 25–01–1951 | 15–12–1982 | 19–12–1996 | 03–12–1999 |

**ಅನುಬಂಧ– III**

**ಕಾರ್ಮಿಕ ಇಲಾಖೆಯ ಉಪ ಕಾರ್ಮಿಕ ಆಯುಕ್ತರ ದಿನಾಂಕ:1–1–2009 ಮತ್ತು 1–1–2010ರಲ್ಲಿದ್ದಂತೆ ಜೇಷ್ಠತಾ ಪಟ್ಟಿ.**

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಶ್ರೀ/ಶ್ರೀಮತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಮುಂಬಡ್ತಿ ಹೊಂದಿದ ದಿನಾಂಕ | ಮುಂಬಡ್ತಿ ಅರ್ಹತಾ ದಿನಾಂಕ |
|---|---|---|---|---|---|
| 1 | ಜೆ.ಟಿ.ಜಿಂಕಲಪ್ಪ | 18–02–1955 | 23–03–1991 | 03–12–1999 | 03–12–1999 |
| 2 | ಎಸ್.ನರಸಿಂಹಮೂರ್ತಿ | 14–04–1962 | 13–08–1991 | 03–12–1999 | 03–12–1999 |
| 3 | ವಿ.ಎನ್.ಹಿಟ್ಟಣಗಿ | 25–06–1952 | 04–03–1980 | 19–12–1995 | 03–12–1999 |
| 4 | ಜಿ.ಹೆಚ್.ಕೊಂಗಿ | 21–01–1953 | 04–03–1980 | 19–12–1995 | 03–12–1999 |
| 5 | ಎನ್.ನಂಜುಂಡಪ್ಪ | 25–01–1951 | 15–12–1982 | 19–12–1996 | 03–12–1999 |
| 6 | ಟಿ.ಶ್ರೀನಿವಾಸ್ | 01–04–1959 | 10–10–1991 | 07–01–2008 | 07–01–2008 |
| 7 | ಜೆ.ಎಂ.ಜಯದೇವಯ್ಯ | 08–02–1954 | 25–11–1982 | 07–01–2008 | 07–01–2008 |
| 8 | ಜಿ.ಮಂಜುನಾಥ್, | 30–03–1969 | 29–03–1997 | 07–01–2008 | 07–01–2008 |

## ಅನುಬಂಧ– IV

### ಕಾರ್ಮಿಕ ಇಲಾಖೆಯ ಉಪ ಕಾರ್ಮಿಕ ಆಯುಕ್ತರ ದಿನಾಂಕ:1–1–2011 ರಲ್ಲಿದ್ದಂತೆ ಜೇಷ್ಠತಾ ಪಟ್ಟಿ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಶ್ರೀ/ಶ್ರೀಮತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಮುಂಬಡ್ತಿ ಹೊಂದಿದ ದಿನಾಂಕ | ಮುಂಬಡ್ತಿ ಅರ್ಹತಾ ದಿನಾಂಕ |
|---|---|---|---|---|---|
| 1 | ಎನ್.ನಂಜುಂಡಪ್ಪ | 25–01–1951 | 15–12–1982 | 19–12–1996 | 03–12–1999 |
| 2 | ಟಿ.ಶ್ರೀನಿವಾಸ್ | 01-04-59 | 10-10-91 | 07-01-08 | 07-01-08 |
| 3 | ಜೆ.ಎಂ.ಜಯದೇವಯ್ಯ | 08-02-54 | 25-11-82 | 07-01-08 | 07-01-08 |
| 4 | ಜಿ.ಮಂಜುನಾಥ್, | 30-03-69 | 29-03-97 | 07-01-08 | 07-01-08 |
| 5 | ಇ. ಲಕ್ಷ್ಮಪ್ಪ | 01-02-58 | 30-07-91 | 06-08-10 | 06-08-10 |

## ಅನುಬಂಧ– V

### ಕಾರ್ಮಿಕ ಇಲಾಖೆಯ ಉಪ ಕಾರ್ಮಿಕ ಆಯುಕ್ತರ ದಿನಾಂಕ:1–1–2012 ರಲ್ಲಿದ್ದಂತೆ ಜೇಷ್ಠತಾ ಪಟ್ಟಿ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಶ್ರೀ/ಶ್ರೀಮತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಮುಂಬಡ್ತಿ ಹೊಂದಿದ ದಿನಾಂಕ | ಮುಂಬಡ್ತಿ ಅರ್ಹತಾ ದಿನಾಂಕ |
|---|---|---|---|---|---|
| 1 | ಟಿ.ಶ್ರೀನಿವಾಸ್ | 01-04-59 | 10-10-91 | 07-01-08 | 07-01-08 |
| 2 | ಜೆ.ಎಂ.ಜಯದೇವಯ್ಯ | 08-02-54 | 25-11-82 | 07-01-08 | 07-01-08 |
| 3 | ಜಿ.ಮಂಜುನಾಥ್, | 30-03-69 | 29-03-97 | 07-01-08 | 07-01-08 |
| 4 | ಇ. ಲಕ್ಷ್ಮಪ್ಪ | 01-02-58 | 30-07-91 | 06-08-10 | 06-08-10 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಯು.ಎನ್.ನಾಗೇಂದ್ರ,**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

**ಪಿ.ಆರ್. 979**

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 101 ನಯೋಸೇ 2012, ಬೆಂಗಳೂರು, ದಿನಾಂಕ 23.07.2012.**

ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯ ಹೆಚ್ಚುವರಿ ನಿರ್ದೇಶಕರ ವೃಂದದ ದಿನಾಂಕ: 01.01.2012ರಲ್ಲಿದ್ದಂತೆ ಕರಡು ಜೇಷ್ಠತಾ ಪಟ್ಟಿ ಅನುಬಂಧ–1ರಲ್ಲಿರುವಂತೆ ಇದರೊಂದಿಗೆ ಲಗತ್ತಿಸಿದೆ ಸದರಿ ಕರಡು ಜೇಷ್ಠತಾ ಪಟ್ಟಿಯಲ್ಲಿ ನೀಡಲಾಗಿರುವ ಸ್ಥಾನ, ಸೇವಾವಿವರಗಳು ಮುಂತಾದವುಗಳ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಅಂತಹ ಆಕ್ಷೇಪಣೆಗಳನ್ನು ಅವಶ್ಯವಿರುವ ದಾಖಲೆಗಳೊಂದಿಗೆ ಹಾಗೂ ಅನುಸಮರ್ಥನೆಗಳೊಂದಿಗೆ ಈ ಪ್ರಕಟಣೆ ಹೊರಡಿಸಿದ 15 ದಿನದೊಳಗೆ ಸಲ್ಲಿಸುವಂತೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ರಮೇಶ್ ಬಾಬು,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ಅನುಬಂಧ–1**

**ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯ ದಿನಾಂಕ 01.01.2012ರಲ್ಲಿದ್ದಂತೆ ನಗರ ಮತ್ತು ಗ್ರಾಮಾಂತರ ಯೋಜನಾ ಹೆಚ್ಚುವರಿ ನಿರ್ದೇಶಕರ ವೃಂದದ ತಾತ್ಕಾಲಿಕ ಕರಡು ಜೇಷ್ಠತಾ ಪಟ್ಟಿ.**

| ಕ್ರ. ಸಂ. | ಹೆಸರು ಶ್ರೀ/ಶ್ರೀಮತಿ | ನೇಮಕಾತಿ ವಿಧಾನ | ಮೀಸಲಾತಿ ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಶ್ರೀ ಎಸ್.ಎಸ್. ಟೋಪಗಿ | ಮುಂಬಡ್ತಿ | – | 28–03–1954 | 06–01–84 | 22–10–08 | 21–10–08 |
| 2 | ಶ್ರೀ ಎಸ್.ಬಿ. ಹೊನ್ನೂರ್ | ಮುಂಬಡ್ತಿ | – | 25–07–1955 | 15–11–83 | 25–10–08 | 25–10–08 |
| 3 | ಶ್ರೀ ಬಿ.ಎಂ. ತಿರಕನಗೌಡರ್ | ಮುಂಬಡ್ತಿ | – | 01–05–1956 | 07–11–83 | 28–04–09 | 03–04–09 |
| 4 | ಶ್ರೀ ಎ.ವಿ. ರಂಗೇಶ್ | ಮುಂಬಡ್ತಿ | – | 06–09–1956 | 10–06–83 | 08–04–09 | 03–04–09 |
| 5 | ಶ್ರೀ ಬಿ. ಮಹೇಂದ್ರ | ಮುಂಬಡ್ತಿ | – | 01–06–1959 | 23–04–84 | 16–09–09 | 15–09–09 |
| 6 | ಶ್ರೀ ಕೆ.ಆರ್.ವೀರೇಂದ್ರನಾಥ್ | ಮುಂಬಡ್ತಿ | – | 08–11–1954 | 01–06–75 | 30–04–11 | 10–12–10 |

**ಬಿ. ರಮೇಶ್ ಬಾಬು**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ಪಿ.ಆರ್. 1044**

**ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆ**

**ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪ ನಿರ್ದೇಶಕರ ಕಛೇರಿ, ಕೋಲಾರ ಜಿಲ್ಲೆ, ಕೋಲಾರ.**

**ಅಧಿಸೂಚನೆ**

**ಸಂಖ್ಯೆ:ಉನಿಚಿ/ಸಿಬ್ಬಂದಿ–1/ಮಾ.ಹ.ಕಾ/163/2012–13, ದಿನಾಂಕ:25–07–2012**

**ವಿಷಯ:–** ಮಾಹಿತಿ ಹಕ್ಕು ಅಧಿನಿಯಮ 2005ರ ಕಲಂ 4(1)(ಬಿ) ಅನುಸಾರ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪ ನಿರ್ದೇಶಕರು, ಕೋಲಾರ ಜಿಲ್ಲೆ ಇವರ ಕಛೇರಿಗೆ ಸಂಬಂಧಿಸಿದಂತೆ ನಿಗದಿಪಡಿಸಿದ ಕೈಪಿಡಿಗಳನ್ನು ಪ್ರಕಟಿಸುವ ಕುರಿತು.

ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪ ನಿರ್ದೇಶಕರ ಕಛೇರಿ, ಕೋಲಾರ ಜಿಲ್ಲೆ, ಕೋಲಾರ ಇವರ ಕಛೇರಿಯು ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪ ನಿರ್ದೇಶಕರ ಕಛೇರಿ, ಕೋಲಾರ ಜಿಲ್ಲಾ ಸಹಕಾರ ಯೂನಿಯನ್ ಕಟ್ಟಡ,ಕೋಲಾರ ಡಿ.ಸಿ.ಸಿ. ಬ್ಯಾಂಕ್ ಪಕ್ಕದ ಕಟ್ಟಡ, ಮುನ್ಸಿಪಲ್ ಖಾತೆ ನಂ.47, ಕೋಲಾರ–563101 ಈ ವಿಳಾದಲ್ಲಿ ಕಾರ್ಯನಿರ್ವಹಿಸುತ್ತಿರುತ್ತದೆ. ಉಪ ನಿರ್ದೇಶಕರು ಈ ಕಛೇರಿಯ ಮುಖ್ಯಸ್ಥರಾಗಿದ್ದು, ಈ ಕಛೇರಿಯ ಕಾರ್ಯವ್ಯಾಪ್ತಿ ಕೋಲಾರ ಜಿಲ್ಲೆಗೆ ಸೀಮಿತವಾಗಿದೆ. ಈ ಕಛೇರಿಯ ಅಧೀನದಲ್ಲಿ ಈ ಕೆಳಕಂಡ ಕಛೇರಿಗಳು ಕಾರ್ಯನಿರ್ವಹಿಸುತ್ತಿದೆ.

1) ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಸಹಾಯಕ ನಿರ್ದೇಶಕರ ಕಛೇರಿ.

2) ತಾಲ್ಲೂಕು ಸಹಕಾರ ಸಂಘಗಳ ಹಿರಿಯ ಲೆಕ್ಕಪರಿಶೋಧಕರ ಕಛೇರಿಗಳ 4 ತಾಲ್ಲೂಕುಗಳು

**1) ಮಾಹಿತಿ ಹಕ್ಕು ಅಧಿನಿಯಮ 2005ರ ನಿಯಮ 4(1)ಬಿ(1) ಸಂಘಟನೆ:–**

ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪ ನಿರ್ದೇಶಕರ ಕಛೇರಿಯು ಇಲಾಖೆಯ ಜಿಲ್ಲಾ ಮಟ್ಟದ ಕಛೇರಿಯಾಗಿರುತ್ತದೆ. ಉಪ ನಿರ್ದೇಶಕರು ಈ ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಕಛೇರಿಯ ಆಡಳಿತ ರಚನೆಯನ್ನು ಈ ಕೆಳಕಂಡ ರೇಖಾ ಚಿತ್ರದ ಮೂಲಕ ತಿಳಿಯಪಡಿಸಲಾಗಿದೆ.

**ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆ**

**ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪ ನಿರ್ದೇಶಕರ ಕಛೇರಿ ಕೋಲಾರ ಜಿಲ್ಲೆ ಕೋಲಾರ.**




**ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪ ನಿರ್ದೇಶಕರ ಕಛೇರಿ, ಕೋಲಾರ ಜಿಲ್ಲೆ**

| **ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಸಹಾಯಕ ನಿರ್ದೇಶಕರಕಛೇರಿ, ಕೋಲಾರ ಉಪ ವಿಭಾಗ** | **ಉಪ ನಿರ್ದೇಶಕರ ಕಛೇರಿ ಸಿಬ್ಬಂದಿ** |
|---|---|
| ಸಹಾಯಕ ನಿರ್ದೇಶಕರು – 01<br>ಹಿರಿಯ ಲೆಕ್ಕಪರಿಶೋಧಕರು – 02<br>ಲೆಕ್ಕಪರಿಶೋಧಕರು – 04<br>ಪ್ರಥಮ ದರ್ಜೆ ಸಹಾಯಕರು – 01<br>ದ್ವಿತೀಯ ದರ್ಜೆ ಸಹಾಯಕರು – 01<br>ಬೆರಳಚ್ಚುಗಾರರು – 01<br>'ಡಿ' ದರ್ಜೆ ನೌಕರರು – 02 | ಉಪ ನಿರ್ದೇಶಕರು –01<br>ಪ್ರಥಮ ದರ್ಜೆ ಸಹಾಯಕರು –01<br>ಹಿರಿಯ ಲೆಕ್ಕಪರಿಶೋಧಕರು –01<br>ಲೆಕ್ಕಪರಿಶೋಧಕರು –02<br>ದ್ವಿತೀಯ ದರ್ಜೆ ಸಹಾಯಕರು –01<br>ಬೆರಳಚ್ಚುಗಾರರು –01<br>'ಡಿ' ದರ್ಜೆ ನೌಕರರು –01 |
| **ಹಿರಿಯ ಲೆಕ್ಕಪರಿಶೋಧಕರ ಕಛೇರಿಯ 4 ತಾಲ್ಲೂಕುಗಳು :**<br><br>**1)ಹಿರಿಯ ಲೆಕ್ಕಪರಿಶೋಧಕರ ಕಛೇರಿ, ಬಂಗಾರಪೇಟೆ**<br>ಹಿರಿಯ ಲೆಕ್ಕಪರಿಶೋಧಕರು – 01<br>ಲೆಕ್ಕಪರಿಶೋಧಕರು – 03<br><br>**2)ಹಿರಿಯ ಲೆಕ್ಕಪರಿಶೋಧಕರ ಕಛೇರಿ, ಮಾಲೂರು**<br>ಹಿರಿಯ ಲೆಕ್ಕಪರಿಶೋಧಕರು – 01<br>ಲೆಕ್ಕಪರಿಶೋಧಕರು – 01<br><br>**3)ಹಿರಿಯ ಲೆಕ್ಕಪರಿಶೋಧಕರ ಕಛೇರಿ, ಶ್ರೀನಿವಾಸಪುರ**<br>ಹಿರಿಯ ಲೆಕ್ಕಪರಿಶೋಧಕರು – 01<br>ಲೆಕ್ಕಪರಿಶೋಧಕರು – 01<br><br>**4) ಹಿರಿಯ ಲೆಕ್ಕಪರಿಶೋಧಕರ ಕಛೇರಿ, ಮುಳಬಾಗಿಲು**<br>ಹಿರಿಯ ಲೆಕ್ಕಪರಿಶೋಧಕರು – 01<br>ಲೆಕ್ಕಪರಿಶೋಧಕರು – 02<br>'ಡಿ'ದರ್ಜೆ ನೌಕರರು – 01 | |

2) **ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:–**

ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 63(1)ರ ಅನ್ವಯ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು ಜಿಲ್ಲೆಯಲ್ಲಿ ಲೆಕ್ಕಪರಿಶೋಧನೆಗೆ ಇರುವ ಸಹಕಾರ ಸಂಘಗಳನ್ನು ಜಿಲ್ಲೆಯಲ್ಲಿ ಉಪ ನಿರ್ದೇಶಕರು ಸೇರಿ ಅಧಿಕಾರಿ ಮತ್ತು ಸಿಬ್ಬಂದಿಗಳಿಗೆ ಪ್ರತಿ ವರ್ಷ ಲೆಕ್ಕಪರಿಶೋಧನೆಗೆ ಹಂಚಿಕೆ ಮಾಡಿ ವಾರ್ಷಿಕ ಕಾರ್ಯಕ್ರಮವನ್ನು ಅನುಮೋದಿಸಿಕೊಡುತ್ತಾರೆ. ಈ ರೀತಿ ಅನುಮೋದನೆಗೊಂಡ ವಾರ್ಷಿಕ ಕಾರ್ಯಕ್ರಮದ ಪ್ರಕಾರ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಅಧಿಕಾರಿ ಸಿಬ್ಬಂದಿಗಳಿಂದ ಲೆಕ್ಕಪರಿಶೋಧನೆ ಕಾರ್ಯಕ್ರಮಬದ್ಧವಾಗಿ ನಡೆಯುವಂತೆ ನೋಡಿಕೊಳ್ಳುವುದು ಹಾಗೂ ಲೆಕ್ಕಪರಿಶೋಧನೆಯಾದ ಸಹಕಾರ ಸಂಘಗಳ ಶುದ್ಧ ವರದಿಗಳನ್ನು ಲೆಕ್ಕಪರಿಶೋಧಕರುಗಳಿಂದ ಪಡೆದು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 63(5)ರ ಪ್ರಕಾರ ಸಂಘಗಳಿಗೆ ಲೆಕ್ಕಪರಿಶೋಧನಾ ಫಲಿತಾಂಶವನ್ನು ನಿರ್ದೇಶಕರಿಂದ ಪಡೆದ ಪ್ರಾಧಿಕಾರ ಪಡೆದ ಅಧಿಕಾರಿಗಳಿಂದ ವರದಿ ಬಿಡುಗಡೆ ಮಾಡಿ ಫಲಿತಾಂಶವನ್ನು ಸಂಬಂಧಿಸಿದವರಿಗೆ ತಿಳಿಯಪಡಿಸುವ ಬಗ್ಗೆ ಕಾರ್ಯನಿರ್ವಹಿಸುವುದು ಹಾಗೂ ಮೇಲುಸ್ತುವಾರಿ ನಡೆಸುವುದು ಹಾಗೂ ನಿರ್ದೇಶಕರಿಂದ ಪಡೆದ ವಂಟನಾ ಆದೇಶದ ಪ್ರಕಾರ ಸ್ವಯಂ ಲೆಕ್ಕಪರಿಶೋಧನೆ ಕಾರ್ಯನಿರ್ವಹಿಸುವುದು. ಸಹಕಾರ ಸಂಘಗಳ ಕಾಯ್ದೆ ಕಲಂ 63(5)ರಡಿಯಲ್ಲಿ ವರದಿ ಬಿಡುಗಡೆಯಾದ ಮೇಲೆ ಸಹಕಾರ ಸಂಘಗಳಿಂದ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 29ರಂತೆ ಸಹಾಯಕ ನಿರ್ದೇಶಕರು ಲೆಕ್ಕಪರಿಶೋಧನಾ ಶುಲ್ಕ ಆಕರಣೆ ಮಾಡಿ ಸಂಘಗಳಿಂದ ವಸೂಲಿ ಮಾಡಿ ಸರ್ಕಾರಕ್ಕೆ ಭರಣ ಮಾಡಿಸುವ ಬಗ್ಗೆ ಮೇಲುಸ್ತುವಾರಿ ನಡೆಸುವುದು ಹಾಗೂ ಲೆಕ್ಕಪರಿಶೋಧನಾ ಶುಲ್ಕ ಆಕರಣೆ ಸರಿ ಇರುವ ಬಗ್ಗೆ ಕಛೇರಿಯ ಸಿಬ್ಬಂದಿಯ ಸಹಾಯದಿಂದ ಪರಿಶೀಲನೆ ನಡೆಸುವುದು ಉಪ ನಿರ್ದೇಶಕರ ಹೊಣೆಗಾರಿಕೆಯಾಗಿರುತ್ತದೆ.

**3) ಮಾಹಿತಿ ಹಕ್ಕು ಅಧಿನಿಯಮ 2005ರ ನಿಯಮ 4(1)(ಬಿ) (11) ಅಧಿಕಾರ ಮತ್ತು ಸಿಬ್ಬಂದಿಗಳ ಅಧಿಕಾರಿ ಮತ್ತು ಕರ್ತವ್ಯಗಳು**

**1) ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪ ನಿರ್ದೇಶಕರು**

1) ಇವರು ಕಛೇರಿಯ ಮುಖ್ಯಸ್ಥರು

2) ಇಲಾಖೆಯ ಕೆಲಸ ಕಾರ್ಯಗಳೂ ಸುಸೂತ್ರವಾಗಿ ನಿರ್ವಹಣೆಯಾಗುತ್ತಿರುವ ಬಗ್ಗೆ ಎಲ್ಲಾ ಅಧೀನ ಅಧಿಕಾರಿಗಳು ಹಾಗೂ ಸಿಬ್ಬಂದಿಗಳ ಮೇಲ್ವಿಚಾರಣೆ ಹಾಗೂ ನಿಯಂತ್ರಣ ಕೈಗೊಳ್ಳುವುದು.

3) ಇಲಾಖೆಯ ನಿರ್ದೇಶಕರಿಂದ ಅನುಮೋದಿತ ಕಾರ್ಯಕ್ರಮದಂತೆ ವೈಯುಕ್ತಿಕ ಲೆಕ್ಕಪರಿಶೋಧನೆ ನಡೆಸುವುದು.

4) ಸಹಕಾರ ಸಂಘಗಳ ಕಾಯ್ದೆ ಕಲಂ 63(5)ರ ಪ್ರಕಾರ ತಾಲ್ಲೂಕು ಮಟ್ಟ ಹಾಗೂ ಜಿಲ್ಲಾ ಮಟ್ಟದವರೆಗಿನ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ವರದಿ ಬಿಡುಗಡೆ ಮಾಡಿ ಫಲಿತಾಂಶವನ್ನು ಸಂಬಂಧಿಸಿದವರಿಗೆ ತಿಳಿಯಪಡಿಸುವುದು.

5) ಸಹಕಾರ ಸಂಘಗಳ ಲೆಕ್ಕಪರಿಶೋಧನೆ ವಾರ್ಷಿಕ ಕಾರ್ಯಕ್ರಮದಂತೆ ನಡೆಯುತ್ತಿರುವ ಬಗ್ಗೆ ಮೇಲುಸ್ತುವಾರಿ ಜರುಗಿಸುವುದು ಹಾಗೂ ಕೇಂದ್ರ ಕಛೇರಿಗೆ ಕಾಲಕಾಲಕ್ಕೆ ಪ್ರಗತಿ ತ:ಖ್ತೆ ಸಲ್ಲಿಸುವುದು.

6) ಲೆಕ್ಕಪರಿಶೋಧನೆಯಾದ ಸಹಕಾರ ಸಂಘಗಳ ಲೆಕ್ಕಪರಿಶೋಧನೆಯನ್ನು ನಿರ್ದೇಶಕರು ಸೂಚಿಸುವಂತೆ ಕೈಗೊಳ್ಳುವುದು ಹಾಗೂ ಕಛೇರಿಯಲ್ಲಿ ಸಿಬ್ಬಂದಿ ಸಹಾಯದಿಂದ ನಿರ್ದೇಶಕರು ನಿಗದಿಪಡಿಸಿದ ಗುರಿಯಂತೆ ಶುದ್ಧವರದಿಗಳನ್ನು ಪರಿಶೀಲಿಸುವುದು.

7) ಲೆಕ್ಕಪರಿಶೋಧನಾ ಶುಲ್ಕ ವಸೂಲಾತಿಯ ಬಗ್ಗೆ ಸಹಾಯಕ ನಿರ್ದೇಶಕರು, ಸಹಕಾರ ಸಂಘಗಳ ನಿಯಮ 29ರಂತೆ ಆಕರಣೆ ಮಾಡಲಾದ ಶುಲ್ಕ ವಸೂಲಾತಿಯ ಪ್ರಗತಿ ಬಗ್ಗೆ ಮೇಲುಸ್ತುವಾರಿ ನಡೆಸುವುದು ಹಾಗೂ ಶುಲ್ಕ ಆಕರಣೆಯ ನಿಖರತೆ ಬಗ್ಗೆ ಪರಿಶೀಲಿಸುವುದು. ಹಾಗೂ ಕೇಂದ್ರ ಕಛೇರಿಗೆ ಪ್ರಗತಿ ತ:ಖ್ತೆಗಳನ್ನು ಕಾಲಕಾಲಕ್ಕೆ ಸಲ್ಲಿಸುವುದು.

8) ಸಹಾಯಕ ನಿರ್ದೇಶಕರು ಹಾಗೂ ಕಛೇರಿಯ ಲೆಕ್ಕಪರಿಶೋಧನಾ ಸಿಬ್ಬಂದಿಯವರ ಪ್ರವಾಸ ಕಾರ್ಯಕ್ರಮಗಳನ್ನು ಅನುಮೋದಿಸುವುದು ಹಾಗೂ ದಿನಚರಿ ವಿಮರ್ಶೆ ಮಾಡುವುದು.

9) ನಿರ್ದೇಶಕರಿಂದ ಅನುಮೋದಿತ ಕಾರ್ಯಕ್ರಮದಂತೆ ಆಯ್ದ ಅಧೀಯ ಕಛೇರಿಗಳ ನಿರೀಕ್ಷಣೆ ಕೈಗೊಳ್ಳುವುದು.

10) ಜಿಲ್ಲೆಯಲ್ಲಿ ಗ್ರೂಪ್ 'ಸಿ' ಸಿಬ್ಬಂದಿಯವರ ಶಿಸ್ತು ಪ್ರಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸುವುದು.

11) ಗ್ರೂಪ್ 'ಸಿ' ಸಿಬ್ಬಂದಿಯವರ ಆಸ್ತಿ ಮತ್ತು ಋಣ ತ:ಖ್ತೆಗಳನ್ನು ಪರಿಶೀಲಿಸಿ ಅಂಗೀಕರಿಸುವುದು.

12) ಇಲಾಖೆಯು ನಿಗದಿಪಡಿಸಿರುವಂತೆ ಜಿಲ್ಲೆಯಲ್ಲಿ ಇನ್ನಿತರೆ ಆಡಳಿತಾತ್ಮಕ ಕೆಲಸ ಕಾರ್ಯಗಳನ್ನು ನಿರ್ವಹಿಸುವುದು.

**4) ಸಿಬ್ಬಂದಿಗಳ ಅಧಿಕಾರ ಮತ್ತು ಜವಾಬ್ದಾರಿಗಳು:–**

**1) ಕಛೇರಿಗೆ ಹೊಂದಿಕೊಂಡ ಹಿರಿಯ ಲೆಕ್ಕಪರಿಶೋಧಕರು:–**

1) ಕಛೇರಿಯಲ್ಲಿ ಇವರಿಗೆ ಕಛೇರಿ ಕೈಪಿಡಿಯಲ್ಲಿ ಸೂಚಿಸಿರುವಂತೆ ಉಪ ನಿರ್ದೇಶಕರು ವಹಿಸಿಕೊಟ್ಟಿರುವ ಲೆಕ್ಕಪರಿಶೋಧನೆ–1 ಶಾಖೆ ಹಾಗೂ ಇನ್ನಿತರೆ ಶಾಖೆಗಳಿಗೆ ಸಂಬಂಧಿಸಿದ ಟಪಾಲುಗಳನ್ನು ಸ್ವೀಕರಿಸಿ, ಟಪಾಲುಗಳನ್ನು ಪರಿಶೀಲಿಸಿ ಕಡತಗಳಲ್ಲಿ ಉಪ ನಿರ್ದೇಶಕರಿಗೆ ಮಂಡಿಸಿ ಆದೇಶಗಳನ್ನು ಪಡೆದು ಆದೇಶಗಳಂತೆ ಹಾಗೂ ಕಛೇರಿ ಕೈಪಿಡಿಯಲ್ಲಿ ಸೂಚಿಸಿರುವ ಕಾರ್ಯ ವಿಧಾನದಂತೆ ಕರ್ತವ್ಯ ನಿರ್ವಹಿಸುವುದು.

2) ನಿರ್ದೇಶಕರಿಂದ ಅನುಮೋದಿತವಾದ ವಾರ್ಷಿಕ ಲೆಕ್ಕಪರಿಶೋಧನಾ ವೈಯುಕ್ತಿಕ ಕಾರ್ಯಕ್ರಮದಂತೆ ಉಪ ನಿರ್ದೇಶಕರಿಂದ ಪಡೆದು ಕಛೇರಿ ಕೆಲಸಗಳಿಗೆ ಧಕ್ಕೆಯಾಗದಂತೆ ಲೆಕ್ಕಪರಿಶೋಧನೆ ಕಾರ್ಯಕೈಗೊಳ್ಳುವುದು ಹಾಗೂ ಲೆಕ್ಕಪರಿಶೋಧನೆ ಪೂರ್ಣಗೊಂಡ ಕೂಡಲೇ ನಿಗದಿಪಡಿಸಿದ ಅವಧಿಯೊಳಗೆ ಶುದ್ಧವರದಿಗಳನ್ನು ಬಿಡುಗಡೆ ಪ್ರಾಧಿಕಾರಿಗಳಿಗೆ ಸಲ್ಲಿಸುವುದು ಹಾಗೂ ಅಂತಹ ಸಂಘಗಳಿಂದ ಸರ್ಕಾರಕ್ಕೆ ಜಮಾ ಮಾಡಿಸಬೇಕಾದ ಲೆಕ್ಕಪರಿಶೋಧನಾ ಶುಲ್ಕ ಸರ್ಕಾರಕ್ಕೆ ಮಾಡಿಸುವುದು ಇವರ ಜವಾಬ್ದಾರಿಯಾಗಿರುತ್ತದೆ.

3) ಕಛೇರಿಯಲ್ಲಿ ಲೆಕ್ಕಪರಿಶೋಧನೆ ಪ್ರಗತಿಗೆ ಸಂಬಂಧಿಸಿದಂತೆ ಪ್ರಗತಿ ತ:ಖ್ತೆಗಳನ್ನು ಅಧೀನ ಕಛೇರಿಗಳಿಂದ ಪಡೆದು ಕೇಂದ್ರ ಕಛೇರಿಗೆ ಸಲ್ಲಿಸಲು ಉಪ ನಿರ್ದೇಶಕರಿಗೆ ಸಹಕರಿಸುವುದು.

4) ಉಪ ನಿರ್ದೇಶಕರು ಸೂಚಿಸಿದಂತೆ ಅಧೀನ ಕಛೇರಿಗಳ ನಿರೀಕ್ಷಣೆ ಕೈಗೊಳ್ಳುವುದು ಹಾಗೂ ನಿರೀಕ್ಷಣಾ ವರದಿಗಳನ್ನು ತಯಾರಿಸಿ ಉಪ ನಿರ್ದೇಶಕರ ಅನುಮೋದನೆಗೆ ಸಲ್ಲಿಸುವುದು.

5) ಕಛೇರಿ ಮುಖ್ಯಸ್ಥರು ಸೂಚಿಸುವ ಇನ್ನಿತರ ಕಛೇರಿ ಕಾರ್ಯಗಳನ್ನು ನಿರ್ವಹಿಸುವುದು.

**2) ಕಛೇರಿಗೆ ಹೊಂದಿಕೊಂಡ ಲೆಕ್ಕಪರಿಶೋಧಕರು:–**

1) ಕಛೇರಿ ಕಾರ್ಯಬಾರದ ಹಂಚಿಕೆ ಆದೇಶದ ಪ್ರಕಾರ ಲೆಕ್ಕಪರಿಶೋಧನಾ ಶಾಖೆ–2 ಮತ್ತು ಇನ್ನಿತರೆ ಶಾಖೆಗಳ ಕರ್ತವ್ಯಗಳನ್ನು ನಿರ್ವಹಿಸುವುದು.

2) ಲೆಕ್ಕಪರಿಶೋಧನಾ ಶಾಖೆಯಲ್ಲಿ ಲೆಕ್ಕಪರಿಶೋಧನಾ ಶುಲ್ಕಕ್ಕೆ ಸಂಬಂಧಿಸಿದಂತೆ ಸ್ವೀಕೃತವಾದ ಪತ್ರಗಳನ್ನು ಪಡೆದು ಪರಿಶೀಲಿಸಿ ಕಡತಗಳನ್ನು ನಿರ್ವಹಿಸಿ ಉಪ ನಿರ್ದೇಶಕರ ಅನುಮೋದನೆಗೆ ಮಂಡಿಸುವುದು.

3) ಲೆಕ್ಕಪರಿಶೋಧನಾ ಶುಲ್ಕ ಆಕರಣೆ ನಿಖರತೆ ಬಗ್ಗೆ ಪರಿಶೀಲಿಸಲು ಉಪ ನಿರ್ದೇಶಕರಿಗೆ ಸಹಕರಿಸುವುದು.

4) ಈ ಕಛೇರಿಯಲ್ಲಿ ಬಿಡುಗಡೆಯಾಗುವ ವರದಿಗಳ ಆರ್ಥಿಕ ತ:ಖ್ತೆಗಳ ನಿಖರತೆ ಬಗ್ಗೆ ಪರಿಶೀಲಿಸಿ ವರದಿ ಬಿಡುಗಡೆಗೆ ಕ್ರಮ ಇಡುವುದು.

5) ಈ ಕಛೇರಿಯ ಲೆಕ್ಕಪರಿಶೋಧಕರು / ಹಿರಿಯ ಲೆಕ್ಕಪರಿಶೋಧಕರು ಹಾಗೂ ಸಹಾಯಕ ನಿರ್ದೇಶಕರ ಪ್ರವಾಸ ಕಾರ್ಯಕ್ರಮ ಹಾಗೂ ದಿನಚರಿಗಳನ್ನು ಅನುಮೋದಿಸಲು ಉಪ ನಿರ್ದೇಶಕರಿಗೆ ಕಡತಗಳನ್ನು ಮಂಡಿಸುವುದು.

6) ನಿರ್ದೇಶಕರಿಂದ ಅನುಮೋದಿಸಲ್ಪಟ್ಟ ಲೆಕ್ಕಪರಿಶೋಧನಾ ಕಾರ್ಯಕ್ರಮದಂತೆ ಕಛೇರಿ ಕೆಲಸಕ್ಕೆ ಧಕ್ಕೆಯಾಗದಂತೆ ಲೆಕ್ಕಪರಿಶೋಧನಾ ಕಾರ್ಯನಡೆಸುವುದು ವರದಿ ಸಲ್ಲಿಸುವುದು ಮತ್ತು ಲೆಕ್ಕಪರಿಶೋಧನೆ ನಿರ್ವಹಿಸಿದ ಸಂಘಗಳಿಂದ ಶುಲ್ಕವನ್ನು ವಸೂಲಿ ಮಾಡಿ ಸರ್ಕಾರಕ್ಕೆ ಜಮಾ ಮಾಡಿಸುವುದು.

7) ಕಛೇರಿ ಮುಖ್ಯಸ್ಥರು ಸೂಚಿಸುವ ಇನ್ನಿತರೆ ಕೆಲಸ ಕಾರ್ಯಗಳನ್ನು ನಿರ್ವಹಿಸುವುದು.

**3) ಪ್ರಥಮ ದರ್ಜೆ ಸಹಾಯಕರು:–**

1) ಕಛೇರಿ ಕಾರ್ಯಬಾರದ ಹಂಚಿಕೆ ಆದೇಶದ ಪ್ರಕಾರ ಉಪ ನಿರ್ದೇಶಕರ ಕಛೇರಿಯ ಸಿಬ್ಬಂದಿ ಶಾಖೆ ಹಾಗೂ ಲೆಕ್ಕದ ಶಾಖೆಯ ಕರ್ತವ್ಯ ನಿರ್ವಹಿಸುವುದು.

2) ಕಾರ್ಯಬಾರದ ಹಂಚಿಕೆ ಆದೇಶದ ಪ್ರಕಾರ ಬರುವ ಟಪಾಲುಗಳನ್ನು ಸ್ವೀಕರಿಸಿ ಪರಿಶೀಲಿಸಿ ಕಡತಗಳಲ್ಲಿ ಉಪ ನಿರ್ದೇಶಕರ ಆದೇಶಕ್ಕೆ ಮಂಡಿಸುವುದು.

3) ಕಛೇರಿ ಸಿಬ್ಬಂದಿಗಳ ಸೇವಾ ಪುಸ್ತಕಗಳ ನಿರ್ವಹಣೆ ಮಾಡುವುದು.

4) ಆಯವ್ಯಯ ತಯಾರಿಸಿ ಕೇಂದ್ರ ಕಛೇರಿಗೆ ಅನುಮೋನೆಗೆ ಸಲ್ಲಿಸಲು ಕ್ರಮ ಇಡುವುದು.

5) ಸಿಬ್ಬಂದಿಗಳ ವೇತನ ಬಿಲ್ಲುಗಳು ಹಾಗೂ ಕಛೇರಿಯ ಸಾದಿಲ್ವಾರು ಬಿಲ್ಲುಗಳನ್ನು ತಯಾರಿಸಿ ಮಂಜೂರಾತಿಗೆ ಮಂಡಿಸುವುದು.

6) ಅಧೀನ ಕಛೇರಿಗಳ ನಿರೀಕ್ಷಣೆಗೆ ಸಹಕರಿಸುವುದು.

7) ಅಭಿಲೇಖಾಲಯದ ಜವಾಬ್ದಾರಿ ನಿರ್ವಹಿಸುವುದು.

8) ಅಧೀನ ಕಛೇರಿಯಿಂದ ಬರುವ ಸಾದಿಲ್ವಾರು ಬಿಲ್ಲುಗಳು / ಟಿ.ಎ. ಬಿಲ್ಲುಗಳನ್ನು ಪರಿಶೀಲಿಸಿ ಮೇಲು ಸಹಿಗೆ ಮಂಡಿಸುವುದು.

9) ಜಿಲ್ಲೆಯ 'ಸಿ' ದರ್ಜೆ ನೌಕರರ ಆಸ್ತಿ ಮತ್ತು ಋಣ ತ:ಖ್ತೆಗಳ ಕಡತಗಳ ನಿರ್ವಹಣೆ ಮಾಡುವುದು.

10) ಕಛೇರಿ ಮುಖ್ಯಸ್ಥರ ಸೂಚಿಸುವ ಇನ್ನಿತರೆ ಕಛೇರಿ ಕೆಲಸಗಳನ್ನು ನಿರ್ವಹಿಸುವುದು.

**4) ದ್ವಿತೀಯ ದರ್ಜೆ ಸಹಾಯಕರು:–**

ದಿನನಿತ್ಯದ ಟಪಾಲು ಸ್ವೀಕೃತಿ ಸಂಬಂಧಿಸಿದ ಶಾಖೆಗಳಿಗೆ ವಿತರಣೆ ಇತ್ಯಾದಿ ವಹಿಸಿಕೊಟ್ಟಿರುವ 01 ಅಥವಾ ಅದಕ್ಕೂ ಹೆಚ್ಚು ಶಾಖೆಗಳ ಸ್ವೀಕೃತಿಗೊಂಡ ಟಪಾಲುಗಳನ್ನು ಆಯಾ ದಿನವೇ ಅಥವಾ ಮರು ದಿನವೇ ಸಂಬಂಧಿಸಿದ ಕಡತಗಳಲ್ಲಿ ಮಂಡಿಸುವುದು. ನಿಗದಿಪಡಿಸಿದ ರಿಜಿಸ್ಟರ್‌ಗಳನ್ನು ನಿರ್ವಹಿಸುವುದು ಹಾಗೂ ಮೇಲಾಧಿಕಾರಿಗಳು ವಹಿಸಿಕೊಡಲಾಗುವ ಇತರೆ ಕರ್ತವ್ಯಗಳನ್ನು ನಿರ್ವಹಿಸುವ ಜವಾಬ್ದಾರಿ ಹೊಂದಿರುತ್ತಾರೆ.

**5) ಬೆರಳಚ್ಚುಗಾರರು:–**

ಕಛೇರಿಯ ಬೆರಳಚ್ಚು ಕೆಲಸಗಳನ್ನು ನಿರ್ವಹಿಸುವುದು ನಿಗದಿಪಡಿಸಿದ ರಿಜಿಸ್ಟರ್‌ಗಳನ್ನು ನಿರ್ವಹಿಸುವುದು.

**6)'ಡಿ' ದರ್ಜೆ ನೌಕರರು:–**

ಕಛೇರಿಯನ್ನು ಚೊಕ್ಕಟವಾಗಿಡುವುದು ಕಛೇರಿ ಸಿಬ್ಬಂದಿಗಳು ಹಾಗೂ ಮುಖ್ಯಸ್ಥರು ವಹಿಸುವ ಕೆಲಸ ನಿರ್ವಹಿಸುವುದು ಸ್ಥಳೀಯ ಟಪಾಲುಗಳನ್ನು ಮುದ್ದಾಂ ಮೂಲಕ ಸಂಬಂಧಪಟ್ಟ ಕಛೇರಿಗಳಿಗೆ ತಲುಪಿಸುವುದು.

**ಮಾಹಿತಿ ಹಕ್ಕು ಅಧಿನಿಯಮ 2005ರ ನಿಯಮ 4(1)(ಬಿ)(111) ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕ್ರಮಗಳು:–**

ಸಾರ್ವಜನಿಕ ಸಹಕಾರ ಸಂಸ್ಥೆಗಳಿಂದ ಅಧೀನ ಸಹಾಯಕ ನಿರ್ದೇಶಕರ ಕಛೇರಿಯಿಂದ ತಾಲ್ಲೂಕು ಹಿರಿಯ ಲೆಕ್ಕಪರಿಶೋಧಕರುಗಳು ಕಛೇರಿಗಳಿಂದ ಇತರೆ ಕಛೇರಿಗಳಿಂದ ಹಾಗೂ ಅಧೀನ ಸಿಬ್ಬಂದಿಗಳಿಂದ ಬರುವ ಮನವಿ/ಪ್ರಸ್ತಾವ ಸ್ವೀಕೃತಿಯಾದೊಡನೆ ಕಛೇರಿಯು ವಿಷಯ ನಿರ್ವಾಹಕರುಗಳು ಹೊಸ ಕಡತವನ್ನು ತೆರೆದು ಅಥವಾ ವಿಷಯದ ಬಗ್ಗೆ ಲಭ್ಯವಿದ್ದಲ್ಲಿ ಹಿಂದಿನ ಕಡತಗಳಲ್ಲಿ ಅವುಗಳ ಪ್ರಾಮುಖ್ಯತೆಗೆ ತಕ್ಕಂತೆ ಸಂಬಂಧಪಟ್ಟ ನಿಯಮಗಳಡಿಯಲ್ಲಿ ಟಿಪ್ಪಣಿಯನ್ನು ಪ್ರಾರಂಭಿಸಿರುತ್ತಾರೆ. ಹೀಗೆ ಅಧೀನ ಸಿಬ್ಬಂದಿಯವರು ಕಡತದಲ್ಲಿ ಸಲ್ಲಿಸಿದ ಟಿಪ್ಪಣಿಗಳನ್ನು ಸಂಬಂಧಪಟ್ಟ ನಿಯಮಗಳಡಿಯಲ್ಲಿ ಕೂಲಂಕುಷವಾಗಿ ಪರಿಶೀಲಿಸಿ ಉಪ ನಿರ್ದೇಶಕರಿಗೆ ಮುಂದಿನ ಕ್ರಮ ಜರುಗಿಸಲು ಕಡತವನ್ನು ಮಂಡಿಸುತ್ತಾರೆ. ಉಪ ನಿರ್ದೇಶಕರು ಸಲ್ಲಿಸಲ್ಪಟ್ಟ ಕಡತಗಳನ್ನು ಸಮಗ್ರವಾಗಿ ಪರಿಶೀಲಿಸಿ ಸದರಿ ಪ್ರಸ್ತಾವನೆಗಳ ಬಗ್ಗೆ ಅಧಿಕಾರ ವ್ಯಾಪ್ತಿಯಲ್ಲಿ ತೀರ್ಮಾನ ತೆಗೆದುಕೊಳ್ಳುತ್ತಾರೆ. ಅಗತ್ಯವಿದ್ದಲ್ಲಿ ಕೇಂದ್ರ ಕಛೇರಿಯ ಮಂಜೂರಾತಿಗೆ ಅನುಮೋದನೆಗೆ ಪ್ರಸ್ತಾವನೆ ಸಲ್ಲಿಸುತ್ತಾರೆ.

**5) ನಿಯಮ 4(1)(ಬಿ)(IV)**

ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು

1. ಸಹಕಾರ ಸಂಘಗಳ ಲೆಕ್ಕಪರಿಶೋಧನೆ:–
ಲೆಕ್ಕಪರಿಶೋಧನೆಯು ಸಂಸ್ಥೆಯ ನೈಜವಾದ ಹಾಗೂ ಕರಾರುವಕ್ಕಾಗಿ ಹಣಕಾಸು ಪರಿಸ್ಥಿತಿ ಪ್ರತಿಬಿಂಬಿತವಾಗಿ ಸಂಸ್ಥೆಯು ಗಳಿಸಿದ ಲಾಭ ಅಥವಾ ಅನುಭವಿಸಿದ ನಷ್ಟವನ್ನು ದೃಢೀಕರಿಸುವುದು ಆಸ್ತಿ ಜವಾಬ್ದಾರಿ ತ:ಖ್ತೆಗಳ ದೃಢೀಕರಿಸುವುದು.

2. ಕಛೇರಿ ಕಾರ್ಯ ನಿರ್ವಹಣೆ:–

| ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪ ನಿರ್ದೇಶಕರು | |
|---|---|
| ಉಪ ನಿರ್ದೇಶಕರು | ಕಛೇರಿಗೆ ಸ್ವೀಕೃತವಾಗಿರುವ ಟಪಾಲುಗಳನ್ನು ಹಾಗೂ ವಿಷಯ ನಿರ್ವಾಹಕರು ಮಂಡಿಸಿರುವ ಕಡತಗಳ ಬಗ್ಗೆ ಪರಿಶೀಲಿಸಿ ಆದ್ಯತೆ ಮೇಲೆ ಹಾಗೂ ತುರ್ತಾಗಿ ಕ್ರಮ ಕೈಗೊಳ್ಳಬೇಕಾಗಿರುತ್ತದೆ. |
| ಕಛೇರಿಯು ಹಿರಿಯ ಲೆಕ್ಕಪರಿಶೋಧಕರು/ ಲೆಕ್ಕಪರಿಶೋಧಕರು/ ಪ್ರಥಮ ದರ್ಜೆ ಸಹಾಯಕರು/ ದ್ವಿತೀಯ ದರ್ಜೆ ಸಹಾಯಕರು | ಕಡತಗಳನ್ನು ಸ್ವೀಕೃತಿಗಳನ್ನು 05 ದಿನಗಳೊಳಗಾಗಿ ಪರಿಶೀಲಿಸಿ. ಟಿಪ್ಪಣಿ ದಾಖಲಿಸಿ ಮೇಲಾಧಿಕಾರಿಗಳಿಗೆ ಮುಂದಿನ ಆದೇಶಕ್ಕಾಗಿ ಮಂಡಿಸಬೇಕಾಗಿರುತ್ತದೆ. |
| ಬೆರಳಚ್ಚುಗಾರರು | ಇವರಿಗೆ ವಹಿಸಿದ ಎಲ್ಲಾ ಕರ್ತವ್ಯಗಳನ್ನು ಆಯಾಯ ದಿನವೇ ಮುಗಿಸಬೇಕಾಗಿರುತ್ತದೆ. |
| 'ಡಿ' ದರ್ಜೆ ನೌಕರರು | ಶಾಖೆಯಲ್ಲಿ ಅವರಿಗೆ ವಹಿಸಿದ ಕೆಲಸಗಳನ್ನು ಆಯಾ ದಿನವೇ ಮುಗಿಸಬೇಕಾಗಿರುತ್ತದೆ. |

**6) ನಿಯಮ 4(1)(ಬಿ)(V)**

ಇಲಾಖೆಯ ಅಧೀನಕ್ಕೆ ಒಳಪಡುವ ಅಥವಾ ಇಲಾಖೆಯ ಕಾರ್ಯನಿರ್ವಹಣೆಯಲ್ಲಿ ನೌಕರರು ಉಪಯೋಗಿಸುವ ನಿಯಮಗಳು, ನಿಬಂಧನೆಗಳು, ಸೂಚನೆಗಳು, ಕೈಪಿಡಿಗಳು ಹಾಗೂ ದಾಖಲೆಗಳು:

**ಲೆಕ್ಕಪರಿಶೋಧನೆಗೆ ಸಂಬಂಧಿಸಿದಂತೆ**

1. ಸಹಕಾರ ಸಂಘಗಳ ಕಾಯ್ದೆ 1959, ಸಹಕಾರ ಸಂಘಗಳ ನಿಯಮ 1960 ಮತ್ತು ಸಹಕಾರ ಸಂಘಗಳ ನಿರ್ದಿಷ್ಟ ವ್ಯವಹರಣೆಗಳಿಗೆ ಅನ್ವಯಿಸುವ ಇತರೆ ಕಾಯ್ದೆ ಕಾನೂನು.
2. ನಿರ್ದೇಶನಾಲಯ ಹೊರಡಿಸಿದ ವಿವಿಧ ಲೆಕ್ಕಪರಿಶೋಧನಾ ಸೂಚನೆಗಳು.
3. ಇಲಾಖೆಯ ಪ್ರಕಟಿಸಿರುವ ಲೆಕ್ಕಪರಿಶೋಧನಾ ಕೈಪಿಡಿಯಲ್ಲಿನ ಮಾಹಿತಿ ಸೂಚನೆಗಳು
4. ಸರ್ಕಾರ/ಇಲಾಖೆ ಹೊರಡಿಸಿರುವ ಅಧಿಸೂಚನೆ ಹಾಗೂ ಸುತ್ತೋಲೆಯ ಸೂಚನೆಗಳ ಅಂಶಗಳು.
5. ಸಹಕಾರ ಸಂಸ್ಥೆಗಳಿಗೆ ಸಂಬಂಧಿಸಿದಂತೆ ಭಾರತೀಯ ರಿಸರ್ವ್ ಬ್ಯಾಂಕ್, ನಬಾರ್ಡ್ ಹಾಗೂ ಸಂಬಂಧಿಸಿದ ಇತರೆ ಪ್ರಾಧಿಕಾರಿಗಳು ಕಾಲಕಾಲಕ್ಕೆ ಹೊರಡಿಸಿದ ನಿರ್ದೇಶನಗಳು.
6. ಸಹಕಾರ ಸಂಸ್ಥೆಗಳಿಗೆ ಸಂಬಂಧಿಸಿದಂತೆ ಸಹಕಾರ ಸಂಘಗಳ ನಿಬಂಧಕರು ಕಾಲಕಾಲಕ್ಕೆ ಹೊರಡಿಸಿರುವ ಸುತ್ತೋಲೆ/ಆದೇಶಗಳು.

**ಕಛೇರಿ ಕಾರ್ಯಗಳ ನಿರ್ವಹಣೆ ಸಂಬಂಧಿಸಿದಂತೆ**

1. ಕರ್ನಾಟಕ ನಾಗರೀಕ ಸೇವಾ ನಿಯಮಗಳು
2. ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು
3. ಕರ್ನಾಟಕ ಆರ್ಥಿಕ ಸಂಹಿತೆ
4. ಕರ್ನಾಟಕ ಖಜಾನೆ ಸಂಹಿತೆ
5. ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು
6. ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು
7. ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಗಳು
8. ಕರ್ನಾಟಕ ನಾಗರೀಕ ಸೇವಾ (ಜೇಷ್ಠತೆ) ನಿಯಮಗಳು
9. ಕಛೇರಿ ಕಾರ್ಯವಿಧಾನ ಕೈಪಿಡಿ
10. ಸಾದಿಲ್ವಾರು ವೆಚ್ಚಗಳ ಕೈಪಿಡಿ
11. ಸರ್ಕಾರದಿಂದ ಮತ್ತು ಇಲಾಖೆಯಿಂದ ಕಾಲಕಾಲಕ್ಕೆ ಹೊರಡಿಸಿರುವ ಆದೇಶಗಳು ಮತ್ತು ಸುತ್ತೋಲೆಗಳು.
12. ಅನ್ವಯವಾಗುವ ಇತರೆ ಸೇವಾ ನಿಯಮಗಳು/ ಇತರೆ ಕಾಯ್ದೆ ಹಾಗೂ ನಿಯಮಗಳಡಿಯಲ್ಲಿ ಕಾರ್ಯನಿರ್ವಹಿಸಲು

**7) ಅಧಿನಿಯಮ 4(1)(ಬಿ)(VI)**

**ಇಲಾಖೆಯ ಹೊಂದಿರುವ ಅಥವಾ ನಿಯಂತ್ರಣದಲ್ಲಿರುವ ದಾಖಲೆಗಳ ವಿವರದ ತ:ಖ್ತೆ:–**

1. ಕಛೇರಿಯ ಲೆಕ್ಕಪತ್ರಕ್ಕೆ ನಿಗದಿಪಡಿಸಿದ ದಾಖಲೆಗಳೂ / ಸುತ್ತೋಲೆಗಳು
2. ಸಿಬ್ಬಂದಿಗಳ ಸೇವಾ ವಿಷಯಗಳಿಗೆ ಸಂಬಂಧಿಸಿದಂತೆ ದಾಖಲೆಗಳು/ಆದೇಶಗಳು/ಸುತ್ತೋಲೆಗಳು
3. ಲೆಕ್ಕಪರಿಶೋಧನೆಗೆ ಸಂಬಂಧಿಸಿದಂತೆ ಈ ಕೆಳಕಂಡ ದಾಖಲೆಗಳು
    1) ವಾರ್ಷಿಕ ಲೆಕ್ಕಪರಿಶೋಧನಾ ಕಾರ್ಯಕ್ರಮ
    2) ಲೆಕ್ಕಪರಿಶೋಧನಾ ಶುಲ್ಕ / ವೆಚ್ಚ ನಿಗದಿ ಮತ್ತು ಆಕರಣೆಗೆ ಸಂಬಂಧಿಸಿದಂತೆ ಸರ್ಕಾರಿ ಆದೇಶಗಳು
    3) ಲೆಕ್ಕಪರಿಶೋಧನೆ ಕೈಗೊಂಡ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ವರದಿಗಳು

petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO.CLR.CR.52/12-13, DATED 24-07-2012**

It is clarified that a caterer or hotelier who has opted for composition of tax under Section 15(1) of the Karnataka Value Added Tax Act, 2003 is liable to pay by way of composition an amount at the rate of 4% on his total turnover relating to supply of articles of food in terms of the Notification No.FD 116 CSL 2006(13) dated 31-03-2006.

**YOGENDRA TRIPATHI,**
Commissioner of Commercial Taxes,
(Karnataka), Bangalore

**P.R. 1034**

## ಪ್ರಾಧೀಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ತುಮಕೂರು ವಿಭಾಗ, ತುಮಕೂರು.

**ಉಪ ಸ್ಥಿತರು:** ಶ್ರೀ ಉಪೇಂದ್ರ ಪ್ರತಾಪ್ ಸಿಂಗ್, ಭಾ.ಅ.ಸೇ., ಪ್ರಾಧೀಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ತುಮಕೂರು ವಿಭಾಗ, ತುಮಕೂರು.

**ನಂ.ಎ3(71(ಎ)/ಅಮೋ/ಸಿಆರ್.54/2009-10, ದಿನಾಂಕ 19-02-2011.**

**1) ಫಿರ್ಯಾದುದಾರರು** 1) ಶ್ರೀ ಎಸ್.ಮಹೇಶ್‌ಕುಮಾರ್, ಪೋಲೀಸ್ ವೃತ್ತ ನಿರೀಕ್ಷಕರು, ಶಿರಾ ಗ್ರಾಮಾಂತರ ವೃತ್ತ, ಶಿರಾ

2) ಶ್ರೀ ಬಿ.ಜೆ. ಕುಮಾರಸ್ವಾಮಿ, ಅರಕ್ಷಕ ಉಪ ನಿರೀಕ್ಷಕರು, ಪಟ್ಟನಾಯಕನಹಳ್ಳಿ ಪೋಲೀಸ್ ಠಾಣೆ,

**2) ಎದುರುದಾರರು** ನಿರ್ದೇಶಕರು, ರಹೀಂ ಸಿಲ್ಕ್ ಮಿಲ್ಸ್ ಪ್ರೈ.ಲಿ., ಹ್ಯಾರೋಟವರ್, ನಂ.8, 2 ಪ್ಲೋರ್, ಲಾಲ್‌ಬಾಗ್ ರಸ್ತೆ, ಬೆಂಗಳೂರು-27

**ಪ್ರಕರಣದ ಹಿನ್ನೆಲೆ:-**

ದಿನಾಂಕ 26-07-2009 ರಂದು ಪಟ್ಟನಾಯಕನಹಳ್ಳಿ ಕ್ರಾಸ್ ಬಳಿ, ಪೋಲೀಸ್ ವೃತ್ತ ನಿರೀಕ್ಷಕರು, ಶಿರಾ ಗ್ರಾಮಾಂತರ ವೃತ್ತ ಹಾಗೂ ಅರಕ್ಷಕ ಉಪ ನಿರೀಕ್ಷಕರು, ಪಟ್ನಾಯಕನಹಳ್ಳಿ. ಪೋಲೀಸ್ ಠಾಣೆ ಇವರ ಇತರೆ ಸಿಬ್ಬಂದಿಗಳೊಡನೆ ಪಟ್ನಾಯಕನಹಳ್ಳಿ ಕ್ರಾಸ್ ಬಳಿ, ಬೆಳಗ್ಗೆ ಸುಮಾರು 9.00 ಗಂಟೆ ಸಮಯದಲ್ಲಿ ಸಿರಾ ಕಡೆಯಿಂದ ಅಮರಾಪುರ ರಸ್ತೆಯ ಪಟ್ನಾಯಕನಹಳ್ಳಿ ಕ್ರಾಸ್‌ನಲ್ಲಿ ಟಯೋಟಾ CRESTA ಎಂಬ ವಾಹನದ ಸಂಖ್ಯೆ ಕೆ.ಎ-01ಪಿ.6742 ವಾಹನವೊಂದನ್ನು ಕಂಡು ತಡೆದು ವಾಹನವನ್ನು ಸುತ್ತುವರಿದು ಪರಿಶೀಲಿಸಿ ನೋಡಲಾಗಿ ವಾಹನದ ಒಳಗಡೆ ಹಿಂಭಾಗದ ಸೀಟಿನ ಕೆಳಗೆ ಹಾಗೂ ಡಿಕ್ಕಿಯಲ್ಲಿ ಶ್ರೀಗಂದದ ತುಂಡುಗಳನ್ನು ತುಂಬಿರುವುದು ಕಂಡುಬಂದು ಸದರಿ ಸ್ಥಳದಲ್ಲಿದ್ದ ಆಸಾಮಿಗಳನ್ನು ನಮ್ಮ ಸಿಬ್ಬಂದಿಗಳು ಹಿಡಿದುಕೊಂಡು ಸ್ಥಳವನ್ನು ಪರಿಶೀಲಿಸಿ ನೋಡಲಾಗಿ ಸುಮಾರು 337 ಕೆ.ಜಿ. ಶ್ರೀಗಂಧದ ತುಂಡುಗಳು ಹಾಗೂ 2 ಲಕ್ಷ ನಗದು ಮತ್ತು 1 ಬೆಡ್‌ಶೀಟ್ ತುಂಬಿರುವುದು ಕಂಡುಬಂತು. ಹಾಗೂ ಸದರಿ ವಾಹನದಲ್ಲಿ ಒಟ್ಟು 185 ಶ್ರೀಗಂದದ ತುಂಡುಗಳಿದ್ದವು.

ವಾಹನದಲ್ಲಿ ಎರಡು ಲಕ್ಷ ರೂಗಳು ಹಾಗೂ ಒಂದು ಬೆಡ್‌ಶೀಟ್ ಸಹ ಇದ್ದವು. ವಾಹನದ ಸಂಖ್ಯೆ-ಕೆ.01-ಪಿ.6742 ಆಗಿದ್ದು, ಸದರಿ ಅರಣ್ಯಮೊಕದ್ದಮೆಗೆ ಸಂಬಂದಿಸಿದಂತೆ ದಿನಾಂಕ 26-07-2009 ರಂದೇ ಪ್ರಥಮ ಮಾಹಿತಿ ವರದಿ ನಂ.0428902 ನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 86, 87, 71(ಎ) ಹಾಗೂ ಅರಣ್ಯ ನಿಯಮ 1969ರ ಸೆಕ್ಷನ್ 379 ಮತ್ತು 34 ಐಪಿಸಿ ರಡಿ ಕೇಸು ದಾಖಲಿಸಿ ಸಂಬಂದಿಸಿದ ಆಸಾಮಿಗಳನ್ನು ನ್ಯಾಯಾಂಗ ಬಂದನಕ್ಕೆ ಒಪ್ಪಿಸಿ ವಾಹನ ಹಾಗೂ ವಾಹನದಲ್ಲಿದ್ದ ಮುದ್ದೆ ಮಾಲು ಬೆಡ್‌ಶೀಟ್ ಹಾಗೂ ನಗದು ರೂ. 2.00 ಲಕ್ಷ ಸಮೇತ ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ತುಮಕೂರು ರವರ ಸಮಕ್ಷಮ ಮುಂದಿನ ಕ್ರಮಕ್ಕಾಗಿ ವಲಯ ಅರಣ್ಯಾಧಿಕಾರಿ, ಶಿರಾ ವಲಯ ಇವರ ವಶಕ್ಕೆ ಒಪ್ಪಿಸಲಾಯಿತು.

ಪೋಲೀಸ್ ವೃತ್ತ ನಿರೀಕ್ಷಕರು, ಶಿರಾ ಗ್ರಾಮಾಂತರ ವೃತ್ತ, ರವರು ಸಲ್ಲಿಸಿದ ಮೇಲ್ಕಂಡ ಅರಣ್ಯ ಅಪರಾಧ ಪ್ರಕರಣ ನಂ.54/2009 ದಿನಾಂಕ 26-07-2009 ರ ದಾಖಲೆಗಳನ್ನು ಪರಿಶೀಲಿಸಿ ಸದರಿ ಪ್ರಕರಣವನ್ನು 71(ಎ) ರಡಿ ತನಿಖೆ ನಡೆಸಲು ಸದರಿ ವಾಹನ ನಂ.ಕೆಎ-01-6742ರ ಮಾಲೀಕರ ವಿಳಾಸವನ್ನು ತಿಳಿಯುವ ಸಲುವಾಗಿ ಒದಗಿಸಿದ ಆರ್.ಸಿ. ಬುಕ್ 'ಬಿ' ರಿಜಿಸ್ಟರ್ ಎಕ್ಸ್‌ಟ್ರಾಕ್ಟನ್ನು ಪರಿಶೀಲಿಸಿದ್ದು, ಸದರಿ ವಾಹನದ ಮಾಲೀಕರು ನಿರ್ದೇಶಕರು, ರಹೀಂ ಸಿಲ್ಕ್ ಮಿಲ್ಸ್ ಪ್ರೈಲಿ., ಹ್ಯಾರೋ ಟವರ್, ನಂ.8 2ನೇ ಪ್ಲೋರ್, ಲಾಲ್‌ಬಾಗ್ ರಸ್ತೆ ಬೆಂಗಳೂರು-27 ಎಂದು ತಿಳಿದುಬಂದಿತು. ಈ ಮದ್ಯೆ ವಾಹನದ ಮಾಲೀಕರು ಯಾರೂ ಸಹ ಸದರಿ ವಾಹನ ನಂ.ಕೆಎ.01-ಪಿ.6742 ಅನ್ನು ಮಧ್ಯಂತರ ವಶಕ್ಕೆ ನೀಡುವಂತೆ ಕೋರಿ, ಈ ನ್ಯಾಯಾಲಯದಲ್ಲಿ ವಕಾಲತ್ತು ಸಲ್ಲಿಸಿರುವುದಿಲ್ಲ. ವಿಚಾರಣೆ ಬಗ್ಗೆ ದಿನಾಂಕ 23-11-2010 ರಂದು, 07-12-2010 ರಂದು 14-12-2010 ರಂದು 11-01-2010 ರಂದು, 18-01-2011 ರಂದು, 01-02-2011 ರಂದು ಹಾಗೂ 19-02-2011 ರಂದು ವಾಹನ ಮಾಲೀಕರಿಗೆ ನೋಟೀಸ್ ಜಾರಿ

ಮಾಡಿದ್ದು, 20–11–2010 ರಂದು ಹಾಗೂ 03–12–2010 ರಂದು ಮತ್ತು 08–12–2010 ರಂದು ನೋಟೀಸ್ ಪಡೆದಿದ್ದು, ಸ್ವೀಕೃತಿ ಪತ್ರ ಬಂದಿರುತ್ತದೆ. ಆದರೆ ವಿಚಾರಣೆಗೆ ವಾಹನ ಮಾಲೀಕರು ಹಾಜರಾಗಿರುವುದಿಲ್ಲ. ಮೊಕದ್ದಮೆ ಬಗ್ಗೆ ದಿನಾಂಕ 19–02–2011 ರಂದು ಮಧ್ಯಾಹ್ನ 3.00 ಗಂಟೆಗೆ ವಿಚಾರಣೆಯನ್ನು ಇಡಲಾಗಿತ್ತು. ವಿಚಾರಣೆ ಸಂದರ್ಭದಲ್ಲಿ ಸಹಾಯಕ ಅಭಿಯೋಜಕ ನಿರ್ದೇಶಕರು, ತುಮಕೂರು ರವರು ಅರಣ್ಯ ಕಾಯ್ದೆ ವಿರುದ್ಧವಾಗಿ ಅರಣ್ಯ ಅಪರಾಧವೆಸಗಲು ಉಪಯೋಗಿಸಲ್ಪಟ್ಟಿರುವ ವಾಹನ ನಂ.ಕೆ.ಎ–01ಪಿ.6742 ಅನ್ನು ಅರಣ್ಯ ಅಪರಾಧ ಪ್ರಕರಣಗಳಲ್ಲಿ ತೊಡಗಿಸಿ ಕೊಂಡಿರುವುದು ಲಭ್ಯವಿರುವ ಕಡತಗಳಂತೆ ಸಾಭೀತಾಗಿರುವುದರಿಂದ ಹಾಗೂ ವಾಹನ ಮಾಲೀಕರಾಗಲಿ ಅಥವಾ ಇವರ ಪರ ವಕೀಲರಾಗಲೀ ಹಾಜರಾಗದಿರುವುದರಿಂದ ಎಕ್ಸ್ ಪಾರ್ಟಿ ಎಂದು ನ್ಯಾಯಾಲಯದಲ್ಲಿ ತೀರ್ಮಾನಿಸಿ ಸಹಾಯಕ ಅಭಿಯೋಜಕ ನಿರ್ದೇಶಕರ ಸಲಹೆ ಮೇರೆಗೆ ಆದೇಶ ಹೊರಡಿಸಲು ತೀರ್ಮಾನಿಸಲಾಯಿತು.

ಸದರಿ ಅರಣ್ಯ ಅಪರಾಧ ಪ್ರಕರಣಕ್ಕೆ ಸಂಬಂದಿಸಿದಂತೆ ಫಿರ್ಯಾದುದಾರರಾದ ಪ್ರಾಸಿಕ್ಯೂಷನ್ನಿನ ಸಾಕ್ಷಿ 1) (ಪಿಡಬ್ಲ್ಯೂ–2) ಆದ ಶ್ರೀ ಬಿ.ಜಿ.ಕುಮಾರಸ್ವಾಮಿ, ಅರಕ್ಷಕ ಉಪ ನಿರೀಕ್ಷಕರು, ಪಟ್ನಾಯಕನಹಳ್ಳಿ ಪೋಲೀಸ್ ಠಾಣೆ, ರವರು ದಿನಾಂಕ 19–02–2011 ರಂದು ಇಲಾಖೆ ಪರ 1 ಸಾಕ್ಷಿಯನ್ನು ವಿಚಾರಣೆ ಮಾಡಲಾಗಿದೆ. ಹಾಗೂ 5 ನಿಶಾನೆಗಳನ್ನು ಗುರುತಿಸಲಾಗಿದೆ. ಮತ್ತು 2 ಮುದ್ದೇ ಮಾಲುಗಳನ್ನು ಗುರುತಿಸಲಾಗಿದೆ.

ಇಲಾಖೆ ಪರವಾಗಿ ADP ಯವರ ವಾದವನ್ನು ಆಲಿಸಲಾಗಿದೆ ಮತ್ತು ವಾಹನದ ಮಾಲೀಕರ ಪರವಾಗಿ ಅವರ ಪರ ವಕೀಲರಾಗಲೀ ಅಥವಾ ವಾಹನ ಮಾಲೀಕರಾಗಲೀ ನ್ಯಾಯಾಲಯಕ್ಕೆ ಹಾಜರಾಗಿರುವುದಿಲ್ಲ ಮತ್ತು ಪ್ರಕರಣದಲ್ಲಿ ಅಮಾನತ್ತಾಗಿರುವ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲು ಅಭಿಯೋಜನದ ಪರ ತಮ್ಮ ಪ್ರಕರಣವನ್ನು ರುಜುವಾತು ಪಡಿಸಿರುತ್ತಾರೆಯೇ?

ಉತ್ತರ: ರುಜುವಾತು ಪಡಿಸಿರುತ್ತಾರೆ.

**ಆದೇಶಕ್ಕೆ ಕಾರಣಗಳು:**

ಮೇಲೆ ತಿಳಿಸಿರುವ ಪ್ರಕರಣದ ಸಂಕ್ಷಿಪ್ತ ವಿವರಗಳನ್ನು ಮತ್ತು ದಾಖಲೆಗಳನ್ನು ಪರಿಶೀಲಿಸಲಾಗಿದೆ, ಇಲಾಖೆಯ ಪರವಾಗಿ ಹಾಜರು ಪಡಿಸಲಾಗಿರುವ ಸಾಕ್ಷಿದಾರರ ಹೇಳಿಕೆಗಳು ಮತ್ತು ದಾಖಲೆಗಳು ಅಮಾನತ್ತಾದ ವಾಹನವನ್ನು ಮತ್ತು ಮುದ್ದೇ ಮಾಲುಗಳನ್ನು ಮುಟ್ಟುಗೋಲು ಹಾಕಿಕೊಳ್ಳಲು ಸಮರ್ಥನೀಯವಾಗಿರುತ್ತದೆ.

1. ಅಭಿಯೋಜನದ ಪರ ವಿಚಾರಣೆಯಾದ ಪ್ರಾಸಿಕ್ಯೂಶನ್ 2ನೇ ಸಾಕ್ಷಿ ಶ್ರೀ ಬಿ.ಜಿ. ಕುಮಾರ್ ಸ್ವಾಮಿ ಪಿ.ಎಸ್.ಐ. ಪಟ್ನಾಯಕನಹಳ್ಳಿ ಪೋಲೀಸ್ ಠಾಣೆ ಶಿರಾ ತಾಲ್ಲೂಕು ಇವರು ಈ ಪ್ರಾಧಿಕಾರದ ಮುಂದೆ ಸಾಕ್ಷಿ ನುಡಿಯುತ್ತಾ ಪಟ್ನಾಯಕನಹಳ್ಳಿ ಕ್ರಾಸ ಬಳಿ ದಿನಾಂಕ: 26–07–2009ರಂದು ಅಕ್ರಮವಾಗಿ ಶ್ರೀ ಗಂಧದ ತುಂಡುಗಳನ್ನು ಸಾಗಿಸುತ್ತಿದ್ದ ವಾಹನವನ್ನು ತಡೆದು ವಿಚಾರಿಸಿದಾಗ ಸದರಿ ಶ್ರೀ ಗಂಧದವನ್ನು ಸಾಗಿಸಲು ಯಾವುದೇ ಪರವಾನಗಿ ಇರದೇ ಇದ್ದುದರಿಂದ ಟಯೋಟಾ CRESTA. ವಾಹನ ಸಂಖ್ಯೆ: ಕೆ.ಎ.–01–ಪಿ–6742 ವಾಹನವನ್ನು ಮತ್ತು ಅದರಲ್ಲಿದ್ದ ಶ್ರೀ ಗಂಧದ ತುಂಡುಗಳನ್ನು ಅವುಗಳ ಉದ್ದ ಅಳತೆಗಳನ್ನು ಪಟ್ಟಿ ಮಾಡಿ ಅದರಲ್ಲಿದ್ದ 2 ಲಕ್ಷ ನಗದನ್ನು ಮತ್ತು ಬೆಡ್‌ಶೀಟ್‌ನ್ನು ಅಮಾನತ್ತು ಮಾಡಿಕೊಳ್ಳಲಾಯಿತು. ಎಂದು ಸಾಕ್ಷಿ ನುಡಿದಿರುತ್ತಾರೆ ಮತ್ತು ವಾಹನ ರಹದಾರಿ ಇಲ್ಲದೆ 185 ಶ್ರೀ ಗಂಧದ ತುಂಡುಗಳನ್ನು ಕಡಿದು ಸಾಗಿಸುತ್ತಿದ್ದ ಟಿಯೋಟಾ ವಾಹನವನ್ನು ಮಹಜರ್ ಮೂಲಕ ಅಮಾನತ್ತು ಮಾಡಿಕೊಳ್ಳಲಾಗಿದೆ. ಮತ್ತು ಶ್ರೀ ಗಂಧದ ತುಂಡುಗಳ ಅಳತೆ ಪಟ್ಟಿಗಳನ್ನು ನಿಶಾನೆ 1ರಿಂದ 185ರ ವರೆಗೆ A ಯಿಂದ K ಎಂದು ಗುರುತಿಸಲಾಗಿದೆ. ವಾಹನವನ್ನು ನಿಶಾನೆ ಪಿ ಎಂದು ಗುರುತಿಸಲಾಗಿದೆ, ತನಿಖೆ ಕೈಗೊಂಡ ಪಿ.ಎಸ್.ಐ. ಪಟ್ನಾಯಕನಹಳ್ಳಿ ಪ್ರಾಸಿಕ್ಯೂಶನ್ ಸಾಕ್ಷಿ 2 ಅನ್ನು ವಿಚಾರಣೆ ಮಾಡಲಾಗಿದ್ದು ಅವರಿಗೂ ಸಹ ವಿವರವಾದ ವಿಚಾರಣೆ ಮಾಡಲಾಗಿದೆ.

   ವಿಚಾರಣೆ ಕಾಲದಲ್ಲಿ ಹಾಜರುಪಡಿಸಿರುವ ಸಾಕ್ಷಾಧಾರಗಳನ್ನು ಹಾಗೂ ಸಾಕ್ಷಿದಾರರ ಹೇಳಿಕೆಗಳನ್ನು ಕರ್ನಾಟಕ ಅರಣ್ಯ ಕಾಯ್ದೆ ಅನ್ವಯ ಪರಿಗಣಿಸಿದಲ್ಲಿ ಸದರಿ ವಾಹನದಲ್ಲಿ ಯಾವುದೇ ರಹದಾರಿ ಇಲ್ಲದೇ, 185 ಶ್ರೀ ಗಂಧದ ತುಂಡುಗಳನ್ನು ಸಾಗಿಸುತ್ತಿದ್ದ ಬಗ್ಗೆ ಸ್ಪಷ್ಟವಾದ ಸಾಕ್ಷಾಧಾರಗಳು ಕಂಡುಬರುತ್ತವೆ.

   ವಾಹನ ಮಾಲೀಕರ ಪರವಾಗಿ ವಕೀಲರಾಗಲಿ ಅಥವಾ ಮಾಲೀಕರಾಗಲೀ ಯಾರೂ ಸಹ ನ್ಯಾಯಾಲಯಕ್ಕೆ ಹಾಜರಾಗಿರುವುದಿಲ್ಲ ಅವರು ತೆಗೆದುಕೊಂಡ ನಿಲುವು ಮತ್ತು ವಿಚಾರಣೆಯಲ್ಲಿನ ಅಂಶಗಳು ಅಭಿಯೋಜನದ ಪರವಾಗಿ ಮಾಡಲಾಗಿರುವ ಸಾಕ್ಷಧಾರಗಳನ್ನು ನಂಬದೆ ಇರಲು ಕಾರಣಗಳಾಗಲಾರವು, ಕಲಂ 80 ಅರಣ್ಯ ಕಾಯ್ದೆ ಅಡಿಯಲ್ಲಿ ತಿಳಿಸಲಾಗಿರುವ ಪೂರ್ವ ಗ್ರಹಿಕೆ (Presumtion) ಪ್ರಕಾರ ಎಲ್ಲಾ ಅರಣ್ಯ ವಸ್ತುಗಳು ಸರ್ಕಾರದ ಆಸ್ತಿಯಾಗಿರುತ್ತವೆ. ಅದಕ್ಕೆ ವಿರುದ್ದವಾದ ಅಂಶಗಳನ್ನು ರುಜುವಾತು ಪಡಿಸುವವರೆಗೂ ಆ ವಸ್ತುಗಳು ಸರ್ಕಾರದ ಆಸ್ತಿಯೆಂದು ಗ್ರಹಿಸಬೇಕಾಗಿರುತ್ತದೆ, ಅದಕ್ಕೆ ವಿರುದ್ದವಾದ ಅಂಶಗಳನ್ನು ರುಜುವಾತು ಪಡಿಸುವುದು ಆರೋಪಿಯ ಜವಾಬ್ದಾರಿಯಾಗಿರುತ್ತದೆ. ಈ ಪ್ರಕರಣದಲ್ಲಿ ವಾಹನದ ಮಾಲೀಕರು ಹಾಜರಾಗಿಅಂತಹ ಯಾವುದೇ ಅಂಶವನ್ನು ರುಜುವಾತು ಪಡಿಸಿರುವುದಿಲ್ಲ ಮತ್ತು ಸದರಿ ವಸ್ತುಗಳನ್ನು ಕ್ರಮಬದ್ಧವಾದ ರಹದಾರಿಯ ಮೂಲಕ ಸಾಗಿಸಲಾಗುತ್ತಿತ್ತು. ಎನ್ನುವುದನ್ನು ರುಜುವಾತು ಪಡಿಸುವುದು ಆರೋಪಿಯ ಅಥವಾ ವಾಹನ ಮಾಲೀಕರ ಜವಾಬ್ದಾರಿಯಾಗಿರುತ್ತದೆ.

   ಈ ಬಗ್ಗೆ ಕರ್ನಾಟಕ ಉಚ್ಚನ್ಯಾಯಾಲಯವು 1989 (1) Kar LJ 454 ILR-1989 Kar Page No 687ರಲ್ಲಿ ಆಯಾಜ್ ಅಹ್ಮದ್ V/S State of Karnataka ಉಲ್ಲೇಖಿತ ತೀರ್ಪಿನಲ್ಲಿ ತಿಳಿಸಿರುವಂತೆ ವಾಹನದ ಮಾಲೀಕರು ತನ್ನ ವಾಹನದಲ್ಲಿ ಅಕ್ರಮವಾಗಿ ಯಾವುದೇ ಅರಣ್ಯ ವಸ್ತುಗಳನ್ನು ಸಾಗಿಸದಂತೆ ಮುಂಜಾಗ್ರತೆ ತೆಗೆದುಕೊಂಡಿರುವ ಬಗ್ಗೆ ಮತ್ತು ಸದರಿಯವರು ಅಂತಹ ಪ್ರಕರಣದ ಬಗ್ಗೆ ತನಗೆ ಮಾಹಿತಿ ಇರಲಿಲ್ಲ ಮತ್ತು ತಾನು ಅದರಲ್ಲಿ ಯಾವುದೇ ಬಾಗಿಅಲ್ಲ ಎನ್ನುದನ್ನು ರುಜುವಾತು ಪಡಿಸುವ ಜವಾಬ್ದಾರಿ ಅವರ ಮೇಲಿರುತ್ತದೆ ಸದರಿ ವಾಹನವು ಮುಟ್ಟುಗೋಲು ಹಾಕಿಕೊಳ್ಳಲು ಯಾವುದೇ ಕಾರಣ ಇಲ್ಲ ಎನ್ನುವುದನ್ನು ವಾಹನ ಮಾಲೀಕರು ಹಾಜರಾಗಿ ತೋರಿಸಿರುವುದಿಲ್ಲ ಮತ್ತು ರುಜುವಾತು ಪಡಿಸಿಲ್ಲ.

ಮೇಲೆ ಹೇಳಿದ ಉಲ್ಲೇಖಿತ ತೀರ್ಪಿನಲ್ಲಿ ಅವಲೋಕಿಸಿರುವ ಅಂಶವನ್ನು ಕರ್ನಾಟಕ ಉಚ್ಚನ್ಯಾಯಾಲಯವು ಈ ಹಿಂದೆ ಪ್ರಕಟಿಸಲಾದ ತೀರ್ಪು ರಮೇಶ್ ದೀಕ್ಷಿತ್ V/S State of Karnataka 1987 (2) kar, LJ, SHN, 278 Page no. & ILR 1985 Kar 2571 ತೀರ್ಪಿನಲ್ಲಿಯೂ ಸಹ ಅಭಿಪ್ರಾಯ ವ್ಯಕ್ತ ಪಡಿಸಿರುತ್ತಾರೆ, ಈ ಅಭಿಪ್ರಾಯದ ಅನುಗುಣವಾಗಿ ಮಾಹನದ ಮಾಲೀಕರು ವಿಚಾರಣಾ ಕಾಲದಲ್ಲಿ ಹಾಜರಾಗಿ ತಮ್ಮ ವಾಹನವು ಅಂತಹ ಕೃತ್ಯಗಳಲ್ಲಿ ಭಾಗವಹಿಸಿರುವುದಿಲ್ಲ ಎಂದು ರುಜುವಾತು ಪಡಿಸಿರುವುದಿಲ್ಲ. ಅಭಿಯೋಜನದ ಪರವಾಗಿ ಸಾಕ್ಷಿದಾರರಿಗೆ ಮಾಡಲಾಗಿರುವ ವಿಚಾರಣೆಯಲ್ಲಿ ಅಂತಹ ಯಾವುದೇ ಅಂಶಗಳಾಗಲೀ, ಪ್ರಯತ್ನಗಳಾಗಲೀ ಕಂಡು ಬಂದಿರುವುದಿಲ್ಲ. ಅಭಿಯೋಜನದ ಪರ ವಿಚಾರಿಸಲಾದ ಸಾಕ್ಷಿದಾರರ ಹೇಳಿಕೆಗಳಿಂದ ವಾಹನವು ಯಾವುದೇ ರಹದಾರಿ ಇಲ್ಲದೆ 185 ಶ್ರೀಗಂಧದ ತುಂಡುಗಳನ್ನು ಕಡಿದು ನಾಟಾಗಳನ್ನು ಸಾಗಿಸಲಾಗುತ್ತಿತ್ತು. ಎನ್ನುವ ಬಗ್ಗೆ ಸ್ಪಷ್ಟವಾಗಿ ರುಜುವಾತು ಪಡಿಸುತ್ತವೆ.

ಆದ್ದರಿಂದ ಸದರಿ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲು ಆದೇಶ ಮಾಡಬೇಕಾಗುತ್ತದೆ.

**ಆದೇಶ**

ಮೇಲೆ ಹೇಳಿದ ಕಾರಣಗಳಿಗೋಸ್ಕರ ಮತ್ತು ವಸ್ತುಸ್ಥಿತಿ ಹಾಗೂ ದಾಖಲೆಗಳನ್ನು ಆಧರಿಸಿ ಶ್ರೀ ಉಪೇಂದ್ರ ಪ್ರತಾಪ್ ಸಿಂಗ್ ಬಾ.ಅ.ಸೇ. ಪ್ರಾಧೀಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ವಿಭಾಗ, ತುಮಕೂರು ಆದ ನನ್ನಿಂದ ಕರ್ನಾಟಕ ಅರಣ್ಯ ಕಾಯ್ದೆ 1963 71 (ಎ) 2ರಿಂದ 7(ಜಿ) ಪ್ರಕಾರ ಅಪರಾಧ ಸಂಖ್ಯೆ: ಎ3: 71 (ಎ) ಅ.ಮೊ. ಸಿಆರ್./54/2009–10ರಲ್ಲಿ ಬಾಗಿಯಾಗಿದ್ದ ಟಯೋಟಾ CRESTA ವಾಹನ ಸಂಖ್ಯೆ:ಕೆಎ–01–ಪಿ–6742 ಅನ್ನು ವಾಹನದ ಮಾಲೀಕರಾದ ನಿರ್ದೇಶಕರು ರಹೀಂ ಸಿಲ್ಕಮಿಲ್ಸ್ ಪ್ರೈ.ಲೀ. ಹ್ಯಾರೋಟವರ್ ನಂ. 8, 2ನೇ ಪ್ಲೋರ್, ಲಾಲಾಬಾಗ್ ರಸ್ತೆ, ಬೆಂಗಳೂರು–27, ರವರು ವಾಹನದಲ್ಲಿದ್ದ 337 ಕೆ..ಜಿ, ಶ್ರೀ ಗಂಧದ 185 ತುಂಡುಗಳನ್ನು ಹಾಗೂ 2 ಲಕ್ಷ ನಗದನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸಲಾಗಿದೆ.. ಕೃತ್ಯಕ್ಕೆ ಬಳಸಿದ ವಾಹನವು ಪ್ರಕರಣದಲ್ಲಿ ಬಾಗಿಯಾಗಿರುತ್ತದೆ, ಎಂದು ಸ್ಪಷ್ಟವಾಗಿ ಕಂಡುಬಂದಿರುವುದರಿಂದ ಸದರಿ ವಾಹನವನ್ನು ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ಈ ವಾಹನವು ಹಾಲಿ ಇರುವ ಸ್ಥಳದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ವಾಹನದ ಅಮಾನತ್ತು ಪ್ರಕ್ರಿಯೆಯಲ್ಲಿ ಸಹಕರಿಸಲು ಕೋರಲು ಹಾಗೂ ಅದೇ ರೀತಿ ಸಂಬಂಧ ಪಟ್ಟ ಶ್ರೀ ಗಂಧದ ತುಂಡುಗಳನ್ನು ಹಾಗೂ ನಗದನ್ನು ಇಲಾಖಾ ನಿಯಮಾನುಸಾರ ಇಲಾಖಾ ವಶಕ್ಕೆ ತೆಗೆದುಕೊಳ್ಳಲು ಆದೇಶಿಸಲಾಗಿದೆ.

ಈ ವಾಹನವು ಎಲ್ಲಾ ಋಣ ಭಾರಗಳಿಂದ ಮುಕ್ತವಾಗಿದೆ ಎಂದು ಸದರಿ ಆದೇಶವನ್ನು ನನ್ನ ಉಕ್ತ ಲೇಖನದಂತೆ ಬೆರಳಚ್ಚುಗಾರರು ಸಿದ್ದ ಪಡಿಸಿದ ನಂತರ ಪರಿಶೀಲನೆ ಮಾಡಿ ನ್ಯಾಯಾಲಯದಲ್ಲಿ ಈ ದಿನ ಅಂದರೆ ದಿನಾಂಕ: 19–02–2011ರಂದು ನನ್ನ ಸಹಿ ಹಾಗೂ ಮುದ್ರೆಯೊಂದಿಗೆ ಆದೇಶ ಹೊರಡಿಸಲಾಗಿದೆ.

ಪ್ರಾದೀಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ತುಮಕೂರು ವಿಭಾಗ, ತುಮಕೂರು.

**ಅನುಬಂಧ**

1) ಅಭಿಯೋಜನದ ಪರ ವಿಚಾರಣೆ ಮಾಡಲಾದ ಸಾಕ್ಷಿಗಳುಃ
ಪ್ರಸಾ–2 ಶ್ರೀ ಬಿ.ಜಿ. ಕುಮಾರಸ್ವಾಮಿ ಅರಕ್ಷಕ, ಉಪ ನಿರೀಕ್ಷಕರು, ಪಟ್ನಾಯಕನಹಳ್ಳಿ, ಪೋಲೀಸ್ ಠಾಣೆ, ಶಿರಾ ತಾಲ್ಲೂಕು.

2) ಅಭಿಯೋಜನದ ಪರ ಗುರ್ತಿಸಿಕೊಂಡ ದಾಖಲೆಗಳುಃ

ನಿಶಾನೆ 1) ಪ್ರಥಮ ಮಾಹಿತಿ ವರದಿ

2. ಮಹಜರ್

3. ಸೀಜರ್ ರಿಪೋರ್ಟ್

4. ತನಿಖಾ ವರದಿ.

3) **ಅಭಿಯೋಜನದ ಪರ ಗುರ್ತಿಸಿಕೊಂಡ ಮುದ್ದೆ ಮಾಲುಗಳು**

1. MO1 ವಾಹನ ಸಂಖ್ಯೆ: ಬಿಳಿ ಬಣ್ಣದ ಟಯೋಟಾ CRESTA ಕಾರು ನಂ. ಕೆಎ.–01–ಪಿ–6742
2. 337 ಕೆಜಿ ಶ್ರೀಗಂಧದ 185 ತುಂಡುಗಳು.
3. 2 ಲಕ್ಷ ನಗದು.

ಪ್ರಾದೀಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ತುಮಕೂರು ವಿಭಾಗ, ತುಮಕೂರು.

## ¿ñ¦ºPÁ¬ AºPñË äñYö E¿ AÊ§¦ àNÊP¦¨ñºPñËYç ¼ñ¦NïïñÐNïô, ¬ôÔôPöÊô ÕÄñY, ¬ôÔôPöÊô.

**¼N.H8:71(a)¦¬óY¦áAÊý.38/93-94 º¼ñNP¦ 19-02-2011**

**ಉಪಸ್ಥಿತರು:** ಶ್ರೀ ಉಪೇಂದ್ರ ಪ್ರತಾಪ್ ಸಿಂಗ್ ಭಾ.ಅ.ಸೇ.,

ಪ್ರಾಧೀಕೃತ ಅಧಿಕಾರಿ ಹಾಗೂ

ಉಪ ಅರಣ್ಯ ಸಂರಕ್ಷಣಾಧಿಕಾರಿ,

ತುಮಕೂರು ವಿಭಾಗ, ತುಮಕೂರು.

**ÀÊñ¦¹ô¹ñÊÊô**

1) ಶ್ರೀ ಧನಂಜಯ, ಭಾ.ಅ.ಸೇ.,
ಮುಖ್ಯ ಅರಣ್ಯ ಅಧಿಕಾರಿ,
ಮೈಸೂರು ಪೇಪರ್‌ಮಿಲ್ಸ್,
ಇಕ್ಕೇರಿ ರಸ್ತೆ, ಸಾಗರ ಶಿವಮೊಗ್ಗ ಜಿಲ್ಲೆ.

2) ಶ್ರೀ ಶಿವಣ್ಣ,
ವಲಯ ಅರಣ್ಯಾಧಿಕಾರಿ,(ನಿವೃತ್ತ)
ಗ್ಯಾರೆಘಟ್ಟ, ಶಿವರಾಮನಹಳ್ಳಿ ಪೋಸ್ಟ್,
ಹೊನ್ನವಳ್ಳಿ ಹೋಬಳಿ, ತಿಪಟೂರು ತಾಲ್ಲೋಕು,
ತುಮಕೂರು ಜಿಲ್ಲೆ.

**ಎದುರುದಾರರು**

ಶ್ರೀ ವೈ.ಬಿ.ಜಿತೇಂದ್ರ ಬಿನ್
ಅನಂತ ರಾಜೇಂದ್ರ,
ಸಂಶೆ ಗ್ರಾಮ ಮತ್ತು ಅಂಚೆ,
ಮೂಡಿಗೆರೆ ತಾಲ್ಲೋಕು,
ಚಿಕ್ಕಮಗಳೂರು ಜಿಲ್ಲೆ.

**ÕÝNïô** ಃ ರಹದಾರಿಯಿಲ್ಲದೆ ಅನಧಿಕೃತವಾಗಿ ತೇಗದ ಮರವನ್ನು ಕ್ಯಾಂಟರ್ ನಂ.ಕೆಎ.18/478ರಲ್ಲಿ ಸಾಗಾಣಿಕೆ ಮಾಡುತ್ತಿದ್ದಾಗ ಅರಣ್ಯ ಮೊಕದ್ದಮೆ ಸಂಖ್ಯೆಃ 35/93-94ನ್ನು ದಿನಾಂಕಃ 07-02-1994ರಂದು ದಾಖಲಿಸಿರುವ ವಿಚಾರವಾಗಿ.

**EÑóU** i) ಶ್ರೀ ಎಸ್.ವಿ. ರವೀಂದ್ರನಾಥಠಾಗೂರ್, ವಕೀಲರು, ಬಾರ್ ಅಸೋಸಿಯೇಷನ್, ತುಮಕೂರುರವರ ದಿನಾಂಕಃ 02-09-2009ರ ಅರ್ಜಿ.

ತಿಪಟೂರು ವಲಯದಲ್ಲಿ ದಿನಾಂಕಃ 07-02-1994 ರಂದು ಕ್ಯಾಂಟರ್ ವಾಹನ ಸಂಖ್ಯೆಃಕೆಎ.18/478 ರಲ್ಲಿ ರಹದಾರಿಯಿಲ್ಲದೆ ತೇಗದ ಮರವನ್ನು ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ಅರಣ್ಯ ಅಪರಾಧ ಪ್ರಕರಣ ಸಂಖ್ಯೆಃ 35/93-94ನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಪ್ರಕಾರ ದಾಖಲಿಸಲಾಗಿರುವ ಹಿನ್ನೆಲೆಯಲ್ಲಿ, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ತುಮಕೂರು ವಿಭಾಗ, ತುಮಕೂರುರವರ ನ್ಯಾಯಾಲಯದಲ್ಲಿ ವಿಚಾರಣೆಯು ನಡೆದು, ಪ್ರಕರಣವನ್ನು ಪ್ರಾರಂಭಿಸಿ ದಿನಾಂಕಃ 16-08-2007 ರಂದು ಅಂತಿಮ ಮುಟ್ಟುಗೋಲು ಆದೇಶವನ್ನು ಹೊರಡಿಸಿ ಅಪರಾದಕ್ಕೆ ಬಳಸಿದ ವಾಹನ ಹಾಗೂ ಮಾಲನ್ನು ಸರ್ಕಾರಕ್ಕೆ ಮಟ್ಟುಗೋಲು ಹಾಕಿಕೊಳ್ಳಲಾಗಿರುತ್ತದೆ. ಈ ಅದೇಶವನ್ನು ಪ್ರಶ್ನಿಸಿ ವಾಹನದ ಮಾಲೀಕರು ತುಮಕೂರಿನ ಒಂದನೇ ಅಪರ ಸತ್ರ (ಶೀಘ್ರಪಥ) ನ್ಯಾಯಾಲಯದಲ್ಲಿ ಕ್ರಿಮಿನಲ್ ಅಪೀಲು ಸಂಖ್ಯೆಃ 86/2007 ರಂತೆ ದಾವೆ ಹೂಡಲಾಗಿ, ಮಾನ್ಯ ನ್ಯಾಯಾಲಯವು ಅರ್ಜಿದಾರರ ಅಹವಾಲನ್ನು ಪರಿಗಣಿಸಿ ಅಂತಿಮವಾಗಿ ಕಾನೂನುಬದ್ದವಾಗಿ ಪ್ರಕರಣವನ್ನು ಇತ್ಯರ್ಥಪಡಿಸಲು ನಿರ್ದೇಶಿಸಿರುತ್ತದೆ.

ನ್ಯಾಯೂಲಯದ ನಿರ್ದೇಶನದನ್ವಯ ಅರ್ಜಿದಾರರ ಪರ ವಕೀಲರು ಪಿಡಬ್ಲೂ-1 ಮತ್ತು ಪಿಡಬ್ಲೂ-2 ರವರುಗಳನ್ನು ಕ್ರಾಸ್ ಎಕ್ಸಾಮಿನೇಷನ್‌ಗಾಗಿ ವಿಚಾರಣೆಗೆ ಮರು ಹಾಜರಾಗಲು ಕೋರಿ ದಿನಾಂಕಃ 2-9-2009 ರಂದು ಈ ಕೆಳ ಸಹಿದಾರರಿಗೆ ಅರ್ಜಿ ಸಲ್ಲಿಸಿರುತ್ತಾರೆ. ಸದರಿ ವಾಹನವನ್ನು ಈ ಹಿಂದೆ ಇಂಡೆಮ್ನಿಟಿಬಾಂಡ್ ಪಡೆದು ಮಾಲೀಕರಿಗೆ ಮಧ್ಯಂತರ ಆದೇಶದ ಮೇಲೆ ವಾಹನವನ್ನು ಬಿಡುಗಡೆ ಮಾಡಲಾಗಿತ್ತು. ವಿಚಾರಣೆ ಕಾಲದಲ್ಲಿ ವಾಹನವನ್ನು ಹಾಜರುಪಡಿಸಿರುವುದಿಲ್ಲ.

ಇಲಾಖೆ ಪರ ಇಬ್ಬರು ಸಾಕ್ಷಿದಾರರನ್ನು ವಿಚಾರಣೆ ಮಾಡಲಾಗಿದೆ. 3 ನಿಶಾನೆಗಳನ್ನು ಗುರುತಿಸಲಾಗಿದೆ ಮತ್ತು 2 ಮುದ್ದೆಮಾಲುಗಳನ್ನು ಗುರುತಿಸಲಾಗಿದೆ.

ಇಲಾಖೆ ಪರವಾಗಿ ADP ಯವರ ಮತ್ತು ವಾಹನದ ಮಾಲೀಕರ ಪರವಾಗಿ ಅವರ ಪರ ವಕೀಲರಾದ ಶ್ರೀ ರವೀಂದ್ರನಾಥ್ ಟ್ಯಾಗೂರ್ ರವರ ವಾದವನ್ನು ಆಲಿಸಲಾಗಿದೆ ಮತ್ತು ಪ್ರಕರಣದಲ್ಲಿ ಅಮಾನತ್ತಾಗಿರುವ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲು ಅಭಿಯೋಜನದ ಪರ ತಮ್ಮ ಪ್ರಕರಣವನ್ನು ರುಜುವಾತು ಪಡಿಸಿರುತ್ತಾರೆಯೇ?

ಉತ್ತರ: ರುಜುವಾತು ಪಡಿಸಿರುತ್ತಾರೆ.

**ಆದೇಶಕ್ಕೆ ಕಾರಣಗಳು:**

ಮೇಲೆ ತಿಳಿಸಿರುವ ಪ್ರಕರಣದ ಸಂಕ್ಷಿಪ್ತ ವಿವರಗಳನ್ನು ಮತ್ತು ದಾಖಲೆಗಳನ್ನು ಪರಿಶೀಲಿಸಲಾಗಿದೆ, ಇಲಾಖೆಯ ಪರವಾಗಿ ಹಾಜರು ಪಡಿಸಲಾಗಿರುವ ಸಾಕ್ಷಿದಾರರ ಹೇಳಿಕೆಗಳು ಮತ್ತು ದಾಖಲೆಗಳು ಅಮಾನತ್ತಾದ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲು ಸಮರ್ಥನೀಯವಾಗಿರುತ್ತದೆ.

2. ಅಭಿಯೋಜನದ ಪರ ವಿಚಾರಣೆಯಾದ ಪ್ರಾಸಿಕ್ಯೂಶನ್‌ಸಾಕ್ಷಿ ಶ್ರೀ ಎಸ್. ದನಂಜಯ ಇವರು ಈ ಪ್ರಾಧಿಕಾರದ ಮುಂದೆ ಸಾಕ್ಷಿ ನುಡಿಯುತ್ತಾ ಕೊನೇಹಳ್ಳಿ ಗ್ರಾಮದ ಹತ್ತಿರ ದಿನಾಂಕ:07–02–1994ರಂದು ಅಕ್ರಮವಾಗಿ ನಾಟಾಗಳನ್ನು ಸಾಗಿಸುತ್ತಿದ್ದ ವಾಹನವನ್ನು ತಡೆದು ವಿಚಾರಿಸಿದಾಗ ಸದರಿ ನಾಟಾಗಳನ್ನು ಸಾಗಿಸಲು ಯಾವುದೇ ಪರವಾನಗಿ ಇರದೇ ಇದ್ದುದರಿಂದ ಕ್ವಾಂಟರ್ ವಾಹನ ಸಂಖ್ಯೆ: ಕೆ.ಎ.–18–478 ವಾಹನವನ್ನು ಮತ್ತು ಅದರಲ್ಲಿದ್ದ ಸಾಗುವಾನಿ ನಾಟಾಗಳನ್ನು ಅವುಗಳ ಉದ್ದ ಅಳತೆಗಳನ್ನು ಪಟ್ಟಿ ಮಾಡಿ ಅಮಾನತ್ತು ಮಾಡಿಕೊಳ್ಳಲಾಯಿತು. ಎಂದು ಸಾಕ್ಷಿ ನುಡಿದಿರುತ್ತಾರೆ ಮತ್ತು ವಾಹನ ರಹದಾರಿ ಇಲ್ಲದೆ ಸಾಗುವಾನಿ ನಾಟಾಗಳನ್ನು ಸಾಗಿಸುತ್ತಿದ್ದ ಕ್ಯಾಂಟರ್ ಅನ್ನು ಮಹಜರ್ ಮೂಲಕ ಅಮಾನತ್ತು ಮಾಡಿಕೊಳ್ಳಲಾಗಿದೆ. ಮತ್ತು ಮರದ ದಿಮ್ಮಿಗಳ ಅಳತೆ ಪಟ್ಟಿಗಳನ್ನು ನಿಶಾನೆ 2 ಎಂದು ಗುರುತಿಸಲಾಗಿದೆ. ಸದರಿಯವರಿಗೆ ವಿವರವಾದ ಪಾಟೀ ಸವಾಲನ್ನು ಮಾಡಲಾಗಿದೆ ಮತ್ತು ಅಪೀಲು ನ್ಯಾಯಾಲಯದ ಆದೇಶದ ಮೇರೆಗೆ ಪುನಃ ಅವಕಾಶ ನೀಡಿದ್ದು ಮುಂದುವರೆದ ಪಾಟೀ ಸವಾಲನ್ನು ಸಹ ಮಾಡಲಾಗಿದೆ ತನಿಖೆ ಕೈಗೊಂಡ ವಲಯ ಅರಣ್ಯಾಧಿಕಾರಿಯವರನ್ನು ಪ್ರಾಸ 2 ಎಂದು ವಿಚಾರಣೆ ಮಾಡಲಾಗಿದ್ದು ಅವರಿಗೂ ಸಹ ವಿವರವಾದ ಪಾಟೀ ಸವಾಲನ್ನು ಮಾಡಲಾಗಿದೆ.

ವಿಚಾರಣೆ ಕಾಲದಲ್ಲಿ ಹಾಜರುಪಡಿಸಿರುವ ಸಾಕ್ಷಾಧಾರಗಳನ್ನು ಹಾಗೂ ಸಾಕ್ಷಿದಾರರ ಹೇಳಿಕೆಗಳನ್ನು ಕರ್ನಾಟಕ ಅರಣ್ಯಕಾಯ್ದೆ ಅನ್ವಯ ಪರಿಗಣಿಸಿದಲ್ಲಿ ಸದರಿ ವಾಹನದಲ್ಲಿ ಯಾವುದೇ ರಹದಾರಿ ಇಲ್ಲದೇ, ಸಾಗುವಾನಿ ನಾಟಾಗಳನ್ನು ಸಾಗಿಸುತ್ತಿದ್ದ ಬಗ್ಗೆ ಸ್ಪಷ್ಟವಾದ ಸಾಕ್ಷಾಧಾರಗಳು ಕಂಡುಬರುತ್ತವೆ.

ವಾಹನ ಮಾಲೀಕರ ಪರವಾಗಿ ಲಿಖಿತ ವಾದವನ್ನು ಮಂಡಿಸಿದ್ದು ಸದರಿ ಲಿಖಿತವಾದದಲ್ಲಿ ಅವರು ತೆಗೆದುಕೊಂಡ ನಿಲುವು ಮತ್ತು ಪಾಟೀ ಸವಾಲಿನಲ್ಲಿ ಮಾಡಿರುವ ಅಂಶಗಳು ಅಭಿಯೋಜನದ ಪರವಾಗಿ ಮಾಡಲಾಗಿರುವ ಸಾಕ್ಷಧಾರಗಳನ್ನು ನಂಬದೆ ಇರಲು ಕಾರಣಗಳಾಗಲಾರವು, ಕಲಂ 80 ಅರಣ್ಯ ಕಾಯ್ದೆ ಅಡಿಯಲ್ಲಿ ತಿಳಿಸಲಾಗಿರುವ ಪೂರ್ವ ಗ್ರಹಿಕೆ (Presumtion) ಪ್ರಕಾರ ಎಲ್ಲಾ ಅರಣ್ಯ ವಸ್ತುಗಳು ಸರ್ಕಾರದ ಆಸ್ತಿಯಾಗಿರುತ್ತವೆ. ಅದಕ್ಕೆ ವಿರುದ್ದವಾದ ಅಂಶಗಳನ್ನು ರುಜುವಾತು ಪಡಿಸುವವರೆಗೂ ಆ ವಸ್ತುಗಳು ಸರ್ಕಾರದ ಆಸ್ತಿಯೆಂದು ಗ್ರಹಿಸಬೇಕಾಗಿರುತ್ತದೆ, ಅದಕ್ಕೆ ವಿರುದ್ದವಾದ ಅಂಶಗಳನ್ನು ರುಜುವಾತು ಪಡಿಸುವುದು ಆರೋಪಿಯ ಜವಾಬ್ದಾರಿಯಾಗಿರುತ್ತದೆ. ಈ ಪ್ರಕರಣದಲ್ಲಿ ವಾಹನದ ಮಾಲೀಕರು ಅಂತಹ ಯಾವುದೇ ಅಂಶವನ್ನು ರುಜುವಾತು ಪಡಿಸಿರುವುದಿಲ್ಲ ಮತ್ತು ಸದರಿ ವಸ್ತುಗಳನ್ನು ಕ್ರಮಬದ್ದವಾದ ರಹದಾರಿಯ ಮೂಲಕ ಸಾಗಿಸಲಾಗುತ್ತಿತ್ತು. ಎನ್ನುವುದನ್ನು ರುಜುವಾತು ಪಡಿಸುವುದು ಆರೋಪಿಯ ಅಥವಾ ವಾಹನ ಮಾಲೀಕರ ಜವಾಬ್ದಾರಿಯಾಗಿರುತ್ತದೆ. ಮಹಜರ್‌ಗೆ ಸ್ವತಂತ್ರ ಸಾಕ್ಷಿದಾರರು ಸಹಿ ಮಾಡಿರುವುದಿಲ್ಲ ಎನ್ನುವ ಕಾರಣವು. ಅಧಿಕಾರಿಗಳ ಸಾಕ್ಷವನ್ನು ನಂಬದೇ ಇರಲು ಕಾರಣವಾಗಲಾರದು.

ಈ ಬಗ್ಗೆ ಕರ್ನಾಟಕ ಉಚ್ಚನ್ಯಾಯಾಲಯವು 1989 (1) Kar LJ 454 ILR-1989 Kar Page No 687ರಲ್ಲಿ ಆಯಾಜ್ ಅಹ್ಮದ್ V/S State of Karnataka ಉಲ್ಲೇಖಿತ ತೀರ್ಪಿನಲ್ಲಿ ತಿಳಿಸಿರುವಂತೆ ವಾಹನದ ಮಾಲೀಕರು ತನ್ನ ವಾಹನದಲ್ಲಿ ಅಕ್ರಮವಾಗಿ ಯಾವುದೇ ಅರಣ್ಯ ವಸ್ತುಗಳನ್ನು ಸಾಗಿಸದಂತೆ ಮುಂಜಾಗ್ರತೆ ತೆಗೆದುಕೊಂಡಿರುವ ಬಗ್ಗೆ ಮತ್ತು ಸದರಿಯವರು ಅಂತಹ ಪ್ರಕರಣದ ಬಗ್ಗೆ ತನಗೆ ಮಾಹಿತಿ ಇರಲಿಲ್ಲ ಮತ್ತು ತಾನು ಅದರಲ್ಲಿ ಯಾವುದೇ ಬಾಗಿಅಲ್ಲ ಎನ್ನುದನ್ನು ರುಜುವಾತು ಪಡಿಸುವ ಜವಾಬ್ದಾರಿ ಅವರ ಮೇಲಿರುತ್ತದೆ ಸದರಿ ವಾಹನವು ಮುಟ್ಟುಗೋಲು ಹಾಕಿಕೊಳ್ಳಲು ಯಾವುದೇ ಕಾರಣ ಇಲ್ಲ ಎನ್ನುವುದನ್ನು ತೋರಿಸಿರುವುದಿಲ್ಲ ಮತ್ತು ರುಜುವಾತು ಪಡಿಸಿಲ್ಲ.

ಮೇಲೆ ಹೇಳಿದ ಉಲ್ಲೇಖಿತ ತೀರ್ಪಿನಲ್ಲಿ ಅವಲೋಕಿಸಿರುವ ಅಂಶವನ್ನು ಕರ್ನಾಟಕ ಉಚ್ಚನ್ಯಾಯಾಲಯವು ಈ ಹಿಂದೆ ಪ್ರಕಟಿಸಲಾದ ತೀರ್ಪು ರಮೇಶ್ ಎನ್ ದೀಕ್ಷಿತ್ V/S State of Karnataka 1987 (2) kar, LJ, SHN, 278 Page no. & ILR 1985 Kar 2571 ತೀರ್ಪಿನಲ್ಲಿಯೂ ಸಹ ಅಭಿಪ್ರಾಯ ವ್ಯಕ್ತ ಪಡಿಸಿರುತ್ತಾರೆ, ಈ ಅಭಿಪ್ರಾಯದ ಅನುಗುಣವಾಗಿ ಮಾಹನದ ಮಾಲೀಕರ ವಿಚಾರಣಾ ಕಾಲದಲ್ಲಿ ತಮ್ಮ ವಾಹನವು ಅಂತಹ ಕೃತ್ಯಗಳಲ್ಲಿ ಭಾಗವಹಿಸಿರುವುದಿಲ್ಲ ಎಂದು ರುಜುವಾತು ಪಡಿಸಿರುವುದಿಲ್ಲ. ಅಭಿಯೋಜನದ ಪರವಾಗಿ ಸಾಕ್ಷಿದಾರರಿಗೆ ಮಾಡಲಾಗಿರುವ ಪಾಟೀ ಸವಾಲಿನಲ್ಲಿ ಅಂತಹ ಯಾವುದೇ ಅಂಶಗಳಾಗಲೀ, ಪ್ರಯತ್ನಗಳಾಗಲೀ ಕಂಡು ಬಂದಿರುವುದಿಲ್ಲ. ಅಭಿಯೋಜನದ ಪರ ವಿಚಾರಿಸಲಾದ ಸಾಕ್ಷಿದಾರರ ಹೇಳಿಕೆಗಳಿಂದ ವಾಹನವು ಯಾವುದೇ ರಹದಾರಿ ಇಲ್ಲದೆ ಸಾಗುವಾನಿ ನಾಟಾಗಳನ್ನು ಸಾಗಿಸಲಾಗುತ್ತಿತ್ತು. ಎನ್ನುವ ಬಗ್ಗೆ ಸ್ಪಷ್ಟವಾಗಿ ರುಜುವಾತು ಪಡಿಸುತ್ತವೆ.

ಆದ್ದರಿಂದ ಸದರಿ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲು ಆದೇಶ ಮಾಡಬೇಕಾಗುತ್ತದೆ.

**ಆದೇಶ**

ಮೇಲೆ ಹೇಳಿದ ಕಾರಣಗಳಿಗೋಸ್ಕರ ಮತ್ತು ವಸ್ತುಸ್ಥಿತಿ ಹಾಗೂ ದಾಖಲೆಗಳನ್ನು ಆಧಾರಿಸಿ ಶ್ರೀ ಉಪೇಂದ್ರ ಪ್ರತಾಪ್ ಸಿಂಗ್ ಬಾ.ಅ.ಸೇ. ಪ್ರಾಧೀಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು, ಆದ ನನ್ನಿಂದ ಕರ್ನಾಟಕ ಅರಣ್ಯ ಕಾಯ್ದೆ 1963 71 (ಎ) 2ರಿಂದ 7(ಜಿ) ಪ್ರಕಾರ ಅಪರಾಧ ಸಂಖ್ಯೆ: ಎ8: 71 (ಎ) ತೇಗ ಸಿಆರ್./38/93–94ರಲ್ಲಿ ಬಾಗಿಯಾಗಿದ್ದ ಕ್ಯಾಂಟರ್ ವಾಹನ ಸಂಖ್ಯೆ: KA–18–478ನ್ನು ಮಧ್ಯಂತರ ಆದೇಶದ ಮೇಲೆ ಮಾಲೀಕರ ವಶಕ್ಕೆ ತೆಗೆದುಕೊಂಡಾಗ ವಾಹನದ ಮಾಲೀಕರಾದ (ಆರ್.ಸಿ.ಪುಸ್ತಕದಂತೆ) ಶ್ರೀ ವೈ.ಬಿ. ಜಿತೇಂದ್ರ ಬಿನ್ ಅನಂತರಾಜೇಂದ್ರ ಸಂಶೆ ಗ್ರಾಮ ಮತ್ತು ಅಂಚೆ ಮೂಡಿಗೆರೆ ತಾಲ್ಲೂಕು ಚಿಕ್ಕಮಗಳೂರು ಜಿಲ್ಲೆ ರವರು ಪ್ರಾಧಿಕಾರದ ಮುಂದೆ ನೀಡಲಾಗಿದ್ದ

ರೂ. 1.00 ಲಕ್ಷ ಮೌಲ್ಯದ ಇಂಡೆಮ್ನೆಟಿ ಬಾಂಡ್‌ನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸಲಾಗಿದೆ. ಸದರಿ ರೂ. 1.00 ಲಕ್ಷ ರೂಪಾಯಿಯನ್ನು ಶ್ರೀ ವೈ.ಬಿ. ಜಿತೇಂದ್ರ ಇವರಿಂದ ಕಂದಾಯ ಬಾಕಿಯಂತೆ ವಸೂಲಿ ಮಾಡಲು ಸಂಬಂಧಪಟ್ಟ ವ್ಯಾಪ್ತಿಯ ಕಂದಾಯ ಅಧಿಕಾರಿಗಳಿಗೆ ಕೋರಲು ನಿರ್ದೇಶಿಸಲಾಗಿದೆ. ಮತ್ತು ಕೃತ್ಯಕ್ಕೆ ಬಳಸಿದ ವಾಹನವು ಪ್ರಕರಣದಲ್ಲಿ ಬಾಗಿಯಾಗಿರುತ್ತದೆ, ಎಂದು ಸ್ಪಷ್ಟವಾಗಿ ಕಂಡುಬಂದಿರುವುದರಿಂದ ಸದರಿ ವಾಹನವನ್ನು ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ಈ ವಾಹನವು ಹಾಲಿ ಇರುವ ಸ್ಥಳದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ವಾಹನದ ಅಮಾನತ್ತು ಪ್ರಕ್ರಿಯೆಯಲ್ಲಿ ಸಹಕರಿಸಲು ಕೋರಲು ಹಾಗೂ ಅದೇ ರೀತಿ ಸಂಬಂಧ ಪಟ್ಟ ವ್ಯಾಪ್ತಿಯ ಇಲಾಖಾ ಅಧಿಕಾರಿಗಳಿಗೆ ವಾಹನವನ್ನು ವಶಕ್ಕೆ ತೆಗೆದುಕೊಳ್ಳಲು ಸೂಚಿಸಲು ಆದೇಶಿಸಲಾಗಿದೆ.

ಈ ವಾಹನವು ಎಲ್ಲಾ ಋಣ ಭಾರಗಳಿಂದ ಮುಕ್ತವಾಗಿದೆ ಎಂದು ಸದರಿ ಆದೇಶವನ್ನು ನನ್ನ ಉಕ್ತ ಲೇಖನದಂತೆ ಬೆರಳಚ್ಚುಗಾರರು ಸಿದ್ದ ಪಡಿಸಿದ ನಂತರ ಪರಿಶೀಲನೆ ಮಾಡಿ ನ್ಯಾಯಾಲಯದಲ್ಲಿ ಈ ದಿನ ಅಂದರೆ ದಿನಾಂಕ: 19–02–2011ರಂದು ನನ್ನ ಸಹಿ ಹಾಗೂ ಮುದ್ರೆಯೊಂದಿಗೆ ಆದೇಶ ಹೊರಡಿಸಲಾಗಿದೆ.

ಪ್ರಾದೀಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ತುಮಕೂರು ವಿಭಾಗ, ತುಮಕೂರು.

**ಅನುಬಂಧ**

1) ಅಭಿಯೋಜನದ ಪರ ವಿಚಾರಣೆ ಮಾಡಲಾದ ಸಾಕ್ಷಿಗಳುಃ
ಪ್ರಸಾ–1 ಎಸ್. ಧನಂಜಯ,
ಪ್ರಸಾ–2 ಶ್ರೀ ಶಿವಣ್ಣ

2) ಅಭಿಯೋಜನದ ಪರ ಗುರ್ತಿಸಿಕೊಂಡ ದಾಖಲೆಗಳುಃ
ನಿಶಾನೆ 1. ಪ್ರಥಮ ಮಾಹಿತಿ ವರದಿ
2. ಮಹಜರ್
3. ಸೀಜರ್ ರಿಪೋರ್ಟ್

ಪ್ರಾದೀಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ತುಮಕೂರು ವಿಭಾಗ, ತುಮಕೂರು.

**¿ñÁ°P¬ A°PñË äñYö E¿ AÊ§Ì àNÊPÌ¨ñ°PñËYç ¼ñÌNïïñÐNïô, ¬ôÔôPöÊô ÕÄñY, ¬ôÔôPöÊô.**

**ಉಪಸ್ಥಿತರು:** ಶ್ರೀ ಉಪೇಂದ್ರ ಪ್ರತಾಪ್ ಸಿಂಗ್ ಭಾ.ಅ.ಸೇ., ಪ್ರಾಧೀಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ತುಮಕೂರು ವಿಭಾಗ, ತುಮಕೂರು.

**¼N.H8:71(a)0AÔö¿ÌPÊ§.08/08-09. °¼ñNP0 19-02-2011**

| **ÀÊñÌ¹ô¹ñÊÊô** | **ಎದುರುದಾರರು** |
|---|---|
| 1) ಶ್ರೀ ಬಿ.ಸಿ. ಹರೀಶ್,<br>ಅಗಿನ ವಲಯ ಅರಣ್ಯಾಧಿಕಾರಿ,<br>ಬುಕ್ಕಾಪಟ್ಟಣ ವಲಯ, ಬುಕ್ಕಾಪಟ್ಟಣ | 1) ಶ್ರೀಮತಿ. ಬೀಬಿಜಾನ್ ಕೋಂ ಲೇಟ್ ರಾಜಾಖಾನ್<br>ತಿಮ್ಮನಹಳ್ಳಿ, ಮಾರಮ್ಮನಗುಡಿ ಬೀದಿ,<br>ಕಂದೀಕೆರೆ ಹೋಬಳಿ, ಚಿಕ್ಕನಾಯಕನಹಳ್ಳಿ<br>ತಾಲ್ಲೋಕು ತುಮಕೂರು ಜಿಲ್ಲೆ. |
| 2) ಶ್ರೀ ಅಂಚೆ ಹನುಮಂತರಾಯಪ್ಪ,<br>ಅರಣ್ಯರಕ್ಷಕ,<br>ಬುಕ್ಕಾಪಟ್ಟಣ ವಲಯ, ಬುಕ್ಕಾಪಟ್ಟಣ | 2) ಶ್ರೀ ಷರೀಫ್‌ಖಾನ್ ಬಿನ್ ಲೇಟ್ ರಾಜಾಖಾನ್<br>ತಿಮ್ಮನಹಳ್ಳಿ, ಮಾರಮ್ಮನಗುಡಿ ಬೀದಿ,<br>ಕಂದೀಕೆರೆ ಹೋಬಳಿ, ಚಿಕ್ಕನಾಯಕನಹಳ್ಳಿ ತಾಲ್ಲೋಕು,<br>ತುಮಕೂರು ಜಿಲ್ಲೆ. |

**ÕÝNïô** : ಬುಕ್ಕಾಪಟ್ಟಣ ಅರಣ್ಯ ವಲಯ ವ್ಯಾಪ್ತಿಯ ಬೋರನಕಣಿವೆ ಅರಣ್ಯ ಪ್ರದೇಶದಿಂದ 12 ನೀಲಗಿರಿ ತುಂಡುಗಳನ್ನು ದಿಃ 15-09-2008 ರಂದು ಅಕ್ರಮವಾಗಿ ಕಡಿದು ಟ್ರ್ಯಾಕ್ಟರ್ ನಂ.KA-44/T-1713 ಮತ್ತು ಟ್ರೈಲರ್ ನಂ. T-1714ರಲ್ಲಿ ಕಡಿದು ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ-ದಾಖಲಿಸಲಾಗಿರುವ ಅರಣ್ಯ ಮೊಕದ್ದಮೆ ಪ್ರಕರಣದ ಕುರಿತು.

**EÑóU** i) ಶ್ರೀಮತಿ ಬೀಬಿಜಾನ್ ಕೋಂ ಲೇಟ್ ರಾಜಾಖಾನ್, ತಿಮ್ಮನಹಳ್ಳಿ, ಚಿಕ್ಕನಾಯಕನಹಳ್ಳಿ ತಾಲ್ಲೋಕುರವರ ಅರ್ಜಿ ದಿನಾಂಕಃ 12-02-2009.

ii) ಶ್ರೀಷರೀಫ್ ಖಾನ್ ಬಿನ್ ಲೇಟ್ ರಾಜಾಖಾನ್, ತಿಮ್ಮನಹಳ್ಳಿರವರ ಅರ್ಜಿ ದಿನಾಂಕಃ 25-03-2009.

iii) ಬುಕ್ಕಾಪಟ್ಟಣ ವಲಯದ ಅರಣ್ಯ ಮೊಕದ್ದಮೆ ಪ್ರಕರಣ ಸಂಖ್ಯೆಃ 08/08-09. ದಿನಾಂಕ**:** 15-09-2008.

ಬುಕ್ಕಾಪಟ್ಟಣ ವಲಯ ವ್ಯಾಪ್ತಿಯ ಬೋರನಕಣಿವೆ ಅರಣ್ಯ ಪ್ರದೇಶದಿಂದ 12 ನೀಲಗಿರಿ ತುಂಡುಗಳನ್ನು ದಿನಾಂಕ: 15–09–2008 ರಂದು ಅಕ್ರಮವಾಗಿ ಕಡಿದು ಟ್ರಾಕ್ಟರ್ ನಂ. KA-44/T-1713 ಮತ್ತು ಟ್ರೈಲರ್ ನಂ.KA-44/T-1714 ರಲ್ಲಿ ಸಾಗಿಸುತ್ತಿದ್ದ ಬಗ್ಗೆ ದಿನಾಂಕ: 15–09–2008 ರಂದು ಬುಕ್ಕಾಪಟ್ಟಣ ಅರಣ್ಯ ವಲಯ ವ್ಯಾಪ್ತಿಯಲ್ಲಿ ನಂ. 08/09ರ ಅರಣ್ಯ ಮೊಕದ್ದಮೆ ಪ್ರಕರಣವನ್ನು ದಾಖಲಿಸಲಾಗಿರುತ್ತದೆ. ಹಾಗೂ ಈ ಸಂಬಂಧ ಟ್ರ್ಯಾಕ್ಟರ್ ಚಾಲಕ ಓಡಿಹೋದುದರಿಂದ ಟ್ರ್ಯಾಕ್ಟರ್ ಹಾಗೂ ಟ್ರೈಲರನ್ನು ವಶಪಡಿಸಿಕೊಂಡು ಬುಕ್ಕಾಪಟ್ಟಣ ಅರಣ್ಯ ಕಛೇರಿಯ ಅವರಣಕ್ಕೆ ತರಲಾಗಿರುತ್ತದೆ. ನಂತರ ಟ್ರ್ಯಾಕ್ಟರ್ ಮಾಲೀಕರಾದ ಶ್ರೀ.ರಾಜಾಖಾನ್ ರವರು ಕಛೇರಿಗೆ ಹಾಜರಾಗಿ ಚಾಲಕನು ಅವರ ಗಮನಕ್ಕೆ ತರದೆ ಈ ಕೃತ್ಯ ಎಸಗಿರುವುದರಿಂದ, ಪ್ರಕರಣವನ್ನು ರಾಜಿ ತೀರ್ಮಾನದಂತೆ ಇತ್ಯರ್ಥಪಡಿಸಲು ಕೋರಿಕೊಂಡಿರುವ ದಾಖಲೆಗಳನ್ನು ವಲಯ ಅರಣ್ಯಾಧಿಕಾರಿಗಳು ಈ ಕಛೇರಿಗೆ ಸಲ್ಲಿಸಿರುತ್ತಾರೆ.

ಪ್ರಕರಣವು ಕರ್ನಾಟಕ ಅರಣ್ಯ ಕಾಯ್ದೆ 1963ರ ನಿಯಮ 71(ಎ) ರ ಉಲ್ಲಂಘನೆಯಾದ್ದರಿಂದ ಟ್ರ್ಯಾಕ್ಟರ್ ಮಾಲೀಕರಾದ ಶ್ರೀ ರಾಜಾಖಾನ್ ರವರಿಗೆ ದಿನಾಂಕ: 21–02–2009ರಂದು ಕರ್ನಾಟಕ ಅರಣ್ಯ ಕಾಯಿದೆ 1963ರ 71(ಬಿ) ಪ್ರಕಾರ ನೋಟೀಸ್ ಜಾರಿ ಮಾಡಲಾಗಿ ಸದರಿಯುವರು ದಿನಾಂಕ: 18–10–2008ರಂದು ಮೃತಪಟ್ಟಿರುವುದರಿಂದ ವಶಪಡಿಸಿಕೊಳ್ಳಲಾಗಿರುವ ಟ್ರ್ಯಾಕ್ಟರ್ ಹಾಗೂ ಟ್ರೈಲರನ್ನು ಬಿಡುಗಡೆಗೊಳಿಸಬೇಕೆಂದು ಕೋರಿ ಅವರ ಪತ್ನಿ ಶ್ರೀಮತಿ ಭೇಬಿಜಾನ್‌ರವರು ದಿನಾಂಕ: 12–02–2009 ರಂದು ಈ ಕಛೇರಿಗೆ ಮನವಿ ಅರ್ಜಿಯನ್ನು ಮರಣ ಪ್ರಮಾಣ ಪತ್ರದೊಂದಿಗೆ ಸಲ್ಲಿಸಿದ್ದು ಈ ಬಾಬ್ತು ರೂ.75000.00 ಮೌಲ್ಯದ ಬ್ಯಾಂಕ್ ಗ್ಯಾರಂಟಿ ಹಾಗೂ ರೂ.75000.00 ಮೊತ್ತದ ಇಂಡೆಮ್ನೆಟಿ ಬಾಂಡ್ ಸಲ್ಲಿಸಿದ ಮೇರೆಗೆ ಕೆಲವು ನಿಬಂಧನೆಗಳಿಗೆ ಒಳಪಟ್ಟು ಟ್ರ್ಯಾಕ್ಟರ್ ಹಾಗೂ ಟ್ರೈಲರನ್ನು ತಾತ್ಕಾಲಿಕವಾಗಿ ವಾಹನ ಮಾಲೀಕರ ವಶಕ್ಕೆ ಬಿಡುಗಡೆ ಮಾಡಿದೆ. ವಿಚಾರಣೆ ಕಾಲದಲ್ಲಿ ವಾಹನವನ್ನು ಹಾಜರು ಪಡಿಸಿರುವುದಿಲ್ಲ.

ಇದೇ ವಿಚಾರದಲ್ಲಿ ಈ ಕಛೇರಿಯಲ್ಲಿ ಮುಂದಿನ ಕ್ರಮ ಜರುಗಿಸುವ ಪೂರ್ವದಲ್ಲಿ ಉಲ್ಲೇಖ (ii) ರಂತೆ ಮೃತ ಟ್ರ್ಯಾಕ್ಟರ್ ಮಾಲೀಕರ ಎರಡನೇ ಮಗನಾದ ಶ್ರೀಷರೀಪ್‌ಖಾನ್‌ರವರಿಂದಲೂ ಸಹ ಅರ್ಜಿಯನ್ನು ಸ್ವೀಕರಿಸಲಾಗಿರುತ್ತದೆ.

ನಂತರ 18–03–2010ರಂದು ವಿಚಾರಣೆಗೆ ಆರೋಪಿಯಾಗಲೀ ಅಥವಾ ಅವರ ವಕೀಲರಾಗಲೀ ಹಾಜರಾಗಿರುವುದಿಲ್ಲ ವಿಚಾರಣೆ ನಡೆದು ಪ್ರಾಸಿಕ್ಯೂಶನ್ ಸಾಕ್ಷಿ 1 ಶ್ರೀ ಕೆ. ಹರೀಶ್ ವಲಯ ಅರಣ್ಯಾಧಿಕಾರಿ, ಬುಕ್ಕಾಪಟ್ಟಣ ವಲಯ. ಹಾಗೂ ಪ್ರಾಸಿಕ್ಯೂಷನ್ ಸಾಕ್ಷಿ 2 ಶ್ರೀ ಅಂಚೆ ಹನುಮಂತರಾಯಪ್ಪ ಅರಣ್ಯ ರಕ್ಷಕ, ಬುಕ್ಕಾಪಟ್ಟಣ ವಲಯ, ಬುಕ್ಕಾಪಟ್ಟಣ ಇವರನ್ನು ವಿಚಾರಣೆ ಮಾಡಿ Eximbit P-1 and P-2 ಮಾರ್ಕ್ ಮಾಡಲಾಯಿತು.

ಇಲಾಖೆ ಪರವಾಗಿ ADP ಯವರ ವಾದವನ್ನು ಆಲಿಸಲಾಗಿದೆ ಮತ್ತು ವಾಹನದ ಮಾಲೀಕರ ಪರವಾಗಿ ಮಾಲೀಕರಾಗಲೀ ಅವರ ಪರ ವಕೀಲರಾದ ಶ್ರೀ ಹನುಮಂತರಾಯಪ್ಪರವರಾಗಲಿ ಹಾಜರಾಗಿರುವುದಿಲ್ಲ ಮತ್ತು ಪ್ರಕರಣದಲ್ಲಿ ಅಮಾನತ್ತಾಗಿರುವ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲು ಅಭಿಯೋಜನದ ಪರ ತಮ್ಮ ಪ್ರಕರಣವನ್ನು ರುಜುವಾತು ಪಡಿಸಿರುತ್ತಾರೆಯೇ?

ಉತ್ತರ: ರುಜುವಾತು ಪಡಿಸಿರುತ್ತಾರೆ.

**ಆದೇಶಕ್ಕೆ ಕಾರಣಗಳು:**

ಮೇಲೆ ತಿಳಿಸಿರುವ ಪ್ರಕರಣದ ಸಂಕ್ಷಿಪ್ತ ವಿವರಗಳನ್ನು ಮತ್ತು ದಾಖಲೆಗಳನ್ನು ಪರಿಶೀಲಿಸಲಾಗಿದೆ, ಇಲಾಖೆಯ ಪರವಾಗಿ ಹಾಜರು ಪಡಿಸಲಾಗಿರುವ ಸಾಕ್ಷಿದಾರರ ಹೇಳಿಕೆಗಳು ಮತ್ತು ದಾಖಲೆಗಳು ಅಮಾನತ್ತಾದ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲು ಸಮರ್ಥನೀಯವಾಗಿರುತ್ತದೆ.

ರಹದಾರಿ ಇಲ್ಲದೆ 12 ನೀಲಗಿರಿ ನಾಟಾಗಳನ್ನು ಸಾಗಿಸುತ್ತಿದ್ದ ಟ್ರಾಕ್ಟರ್ ಹಾಗೂ ಟ್ರೈಲರ್ ಅನ್ನು ಮಹಜರ್ ಮೂಲಕ ಅಮಾನತ್ತು ಮಾಡಿಕೊಳ್ಳಲಾಗಿದೆ, ಮತ್ತು ನೀಲಗಿರಿ ಮರದ ತುಂಡುಗಳ ಅಳತೆ ಪಟ್ಟಿಗಳನ್ನು ನಿಶಾನೆ 3 ಎಂದು ಗುರುತಿಸಲಾಗಿದೆ, ಸದರಿಯುವರಿಗೆ ವಿವರವಾದ ವಿಚಾರಣೆ ಮಾಡಲಾಗಿದೆ ಖನಿಖೆ ಕೈಗೊಂಡ ವಲಯ ಅರಣ್ಯಾಧಿಕಾರಿಯವರನ್ನು ಪ್ರಾಸ 1 ಎಂದು ವಿಚಾರಣೆ ಮಾಡಲಾಗಿದ್ದು ಅವರಿಗೂ ಸಹ ವಿವರವಾದ ವಿಚಾರಣೆ ಮಾಡಲಾಗಿದೆ. ಹಾಗೂ ಪ್ರಾಸಿಕ್ಯೂಶನ್ ಸಾಕ್ಷಿ 2 ಎಂದು ಶ್ರೀ ಅಂಚೇಹನುಮಂತರಾಯಪ್ಪ, ಅರಣ್ಯ ರಕ್ಷಕ ಇವರ ವಿವರವಾದ

ವಿಚಾರಣೆ ಮಾಡಲಾಗಿದ, ಪಾಟೀ ಸವಾಲ್ ಮಾಡಲು ವಾಹನ ಮಾಲೀಕರಾಲೀ, ಇವರ ಪರ ವಕೀಲರಗಲೀ ಹಾಜರಾಗಿರುವುದಿಲ್ಲ, ಅದ್ದರಿಂದ ಪಾಟೀ ಸವಾಲ್ ಇಲ್ಲವೆಂದು ತೆಗೆದುಕೊಳ್ಳಲಾಯಿತು.

ವಿಚಾರಣೆ ಕಾಲದಲ್ಲಿ ಹಾಜರುಪಡಿಸಿರುವ ಸಾಕ್ಷಾಧಾರಗಳನ್ನು ಹಾಗೂ ಸಾಕ್ಷಿದಾರರ ಹೇಳಿಕೆಗಳನ್ನು ಕರ್ನಾಟಕ ಅರಣ್ಯ ಕಾಯ್ದೆ ಅನ್ವಯ ಪರಿಗಣಿಸಿದಲ್ಲಿ ಸದರಿ ವಾಹನದಲ್ಲಿ ಯಾವುದೇ ರಹದಾರಿ ಇಲ್ಲದೇ, ನೀಲಗಿರಿ ನಾಟಾಗಳನ್ನು ಸಾಗಿಸುತ್ತಿದ್ದ ಬಗ್ಗೆ ಸ್ಪಷ್ಟವಾದ ಸಾಕ್ಷಾಧಾರಗಳು ಕಂಡುಬರುತ್ತವೆ.

ಅವರು ತೆಗೆದುಕೊಂಡ ನಿಲುವು ಮತ್ತು ವಿಚಾರಣೆ ಸಮಯದಲ್ಲಿ ಮಾಡಿರುವ ಅಂಶಗಳು ಅಭಿಯೋಜನದ ಪರವಾಗಿ ಮಾಡಲಾಗಿರುವ ಸಾಕ್ಷಧಾರಗಳನ್ನು ನಂಬದೆ ಇರಲು ಕಾರಣಗಳಾಗಲಾರವು, ಕಲಂ 80 ಅರಣ್ಯ ಕಾಯ್ದೆ ಅಡಿಯಲ್ಲಿ ತಿಳಿಸಲಾಗಿರುವ ಪೂರ್ವ ಗ್ರಹಿಕೆ (Presumtion) ಪ್ರಕಾರ ಎಲ್ಲಾ ಅರಣ್ಯ ವಸ್ತುಗಳು ಸರ್ಕಾರದ ಆಸ್ತಿಯಾಗಿರುತ್ತವೆ. ಅದಕ್ಕೆ ವಿರುದ್ದವಾದ ಅಂಶಗಳನ್ನು ರುಜುವಾತು ಪಡಿಸುವವರೆಗೂ ಆ ವಸ್ತುಗಳು ಸರ್ಕಾರದ ಆಸ್ತಿಯೆಂದು ಗ್ರಹಿಸಬೇಕಾಗಿರುತ್ತದೆ, ಅದಕ್ಕೆ ವಿರುದ್ದವಾದ ಅಂಶಗಳನ್ನು ರುಜುವಾತು ಪಡಿಸುವುದು ಆರೋಪಿಯ ಜವಾಬ್ದಾರಿಯಾಗಿರುತ್ತದೆ. ಈ ಪ್ರಕರಣದಲ್ಲಿ ವಾಹನದ ಮಾಲೀಕರು ಅಂತಹ ಯಾವುದೇ ಅಂಶವನ್ನು ರುಜುವಾತು ಪಡಿಸಿರುವುದಿಲ್ಲ ಮತ್ತು ಸದರಿ ವಸ್ತುಗಳನ್ನು ಕ್ರಮಬದ್ದವಾದ ರಹದಾರಿಯ ಮೂಲಕ ಸಾಗಿಸಲಾಗುತ್ತಿತ್ತು. ಎನ್ನುವುದನ್ನು ರುಜುವಾತು ಪಡಿಸುವುದು ಆರೋಪಿಯ ಅಥವಾ ವಾಹನ ಮಾಲೀಕರ ಜವಾಬ್ದಾರಿಯಾಗಿರುತ್ತದೆ.

ಈ ಬಗ್ಗೆ ಕರ್ನಾಟಕ ಉಚ್ಚನ್ಯಾಯಾಲಯವು 1989 (1) Kar LJ 454 ILR-1989 Kar Page No 687 ರಲ್ಲಿ ಆಯಾಜ್ ಅಹ್ಮದ್ V/S State of Karnataka ಉಲ್ಲೇಖಿತ ತೀರ್ಪಿನಲ್ಲಿ ತಿಳಿಸಿರುವಂತೆ ವಾಹನದ ಮಾಲೀಕರು ತನ್ನ ವಾಹನದಲ್ಲಿ ಅಕ್ರಮವಾಗಿ ಯಾವುದೇ ಅರಣ್ಯ ವಸ್ತುಗಳನ್ನು ಸಾಗಿಸದಂತೆ ಮುಂಜಾಗ್ರತೆ ತೆಗೆದುಕೊಂಡಿರುವ ಬಗ್ಗೆ ಮತ್ತು ಸದರಿಯವರು ಅಂತಹ ಪ್ರಕರಣದ ಬಗ್ಗೆ ತನಗೆ ಮಾಹಿತಿ ಇರಲಿಲ್ಲ ಮತ್ತು ತಾನು ಅದರಲ್ಲಿ ಯಾವುದೇ ಬಾಗಿಅಲ್ಲ ಎನ್ನುದನ್ನು ರುಜುವಾತು ಪಡಿಸುವ ಜವಾಬ್ದಾರಿ ಅವರ ಮೇಲಿರುತ್ತದೆ ಸದರಿ ವಾಹನವು ಮುಟ್ಟುಗೋಲು ಹಾಕಿಕೊಳ್ಳಲು ಯಾವುದೇ ಕಾರಣ ಇಲ್ಲ ಎನ್ನುವುದನ್ನು ವಿಚಾರಣೆಗೆ ಹಾಜರಾಗಿ ತೋರಿಸಿರುವುದಿಲ್ಲ ಮತ್ತು ರುಜುವಾತು ಪಡಿಸಿಲ್ಲ.

ಮೇಲೆ ಹೇಳಿದ ಉಲ್ಲೇಖಿತ ತೀರ್ಪಿನಲ್ಲಿ ಅವಲೋಕಿಸಿರುವ ಅಂಶವನ್ನು ಕರ್ನಾಟಕ ಉಚ್ಚನ್ಯಾಯಾಲಯವು ಈ ಹಿಂದೆ ಪ್ರಕಟಿಸಲಾದ ತೀರ್ಪು ರಮೇಶ್ ಎನ್ ದೀಕ್ಷಿತ್ V/S State of Karnataka 1987 (2) kar, LJ, SHN, 278 Page no. & ILR 1985 Kar 2571 ತೀರ್ಪಿನಲ್ಲಿಯೂ ಸಹ ಅಭಿಪ್ರಾಯ ವ್ಯಕ್ತ ಪಡಿಸಿರುತ್ತಾರೆ, ಈ ಅಭಿಪ್ರಾಯದ ಅನುಗುಣವಾಗಿ ವಾಹನದ ಮಾಲೀಕರು ವಿಚಾರಣಾ ಕಾಲದಲ್ಲಿ ಹಾಜರಾಗಿ ತಮ್ಮ ವಾಹನವು ಅಂತಹ ಕೃತ್ಯಗಳಲ್ಲಿ ಭಾಗವಹಿಸಿರುವುದಿಲ್ಲ ಎಂದು ರುಜುವಾತು ಪಡಿಸಿರುವುದಿಲ್ಲ. ಅಭಿಯೋಜನದ ಪರ ವಿಚಾರಿಸಲಾದ ಸಾಕ್ಷಿದಾರರ ಹೇಳಿಕೆಗಳಿಂದ ವಾಹನವು ಯಾವುದೇ ರಹದಾರಿ ಇಲ್ಲದೆ ನೀಲಗಿರಿ 12 ನಾಟಾಗಳನ್ನು ಸಾಗಿಸಲಾಗುತ್ತಿತ್ತು. ಎನ್ನುವ ಬಗ್ಗೆ ಸ್ಪಷ್ಟವಾಗಿ ರುಜುವಾತು ಪಡಿಸುತ್ತವೆ.

ಆದ್ದರಿಂದ ಸದರಿ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲು ಆದೇಶ ಮಾಡಬೇಕಾಗುತ್ತದೆ.

**ಆದೇಶ**

ಮೇಲೆ ಹೇಳಿದ ಕಾರಣಗಳಿಗೋಸ್ಕರ ಮತ್ತು ವಸ್ತು ಸ್ಥಿತಿ ಹಾಗೂ ದಾಖಲಾತಿಗಳನ್ನು ಆಧರಿಸಿ ಶ್ರೀ ಉಪೇಂದ್ರ ಪ್ರತಾಪ್ ಸಿಂಗ್ ಭಾ.ಅ.ಸೇ., ಪ್ರಾಧೀಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು ಆದ ನನ್ನಿಂದ ಕರ್ನಾಟಕ ಅರಣ್ಯ ಕಾಯ್ದೆ 1963 71 (ಎ) 2ರಿಂದ 7(ಜಿ) ಪ್ರಕಾರ ಅಪರಾದ ಸಂಖ್ಯೆ: ಎ8/71 (ಎ)ಅ.ಮೊ. ಪ್ರಕರಣ 8/2008–09 ರಲ್ಲಿ ಬಾಗಿಯಾಗಿದ್ದ ಟ್ರಾಕ್ಟರ್ ವಾಹನ KA-44-T 1713 & ಟ್ರೈಲರ್ ಸಂಖ್ಯೆ: KA-J-44-T 1714ನ್ನು ಮಧ್ಯಂತರ ಆದೇಶದ ಮೇಲೆ ಮಾಲೀಕರ ವಶಕ್ಕೆ ತೆಗೆದುಕೊಂಡಾಗ ವಾಹನದ ಮಾಲೀಕರಾದ (ಆರ್.ಸಿ. ಪುಸ್ತಕದಂತೆ) ಶ್ರೀಮತಿ ಬೇಬಿಜಾನ್ ಕೋಂ ಲೇಟ್ ರಾಜಾಖಾನ್ ತಿಮ್ಮನಹಳ್ಳಿ, ಮಾರಮ್ಮನಗುಡಿ ಬೀದಿ, ಕಂದಿಕೆರ ಹೋಬಳಿ, ಚಿಕ್ಕನಾಯಕನಹಳ್ಳಿ ತಾಲ್ಲೂಕುರವರು ಪ್ರಾಧಿಕಾರದ ಮುಂದೆ ನೀಡಲಾಗಿದ್ದ ರೂ. 0.75 ಲಕ್ಷ ಮೌಲ್ಯದ ಬ್ಯಾಂಕ್ ಗ್ಯಾರಂಟಿಯನ್ನು ಹಾಗೂ ಇದೇ ಮೊತ್ತದ ಇಂಡೆಮ್ನೆಟಿ ಬಾಂಡ್‌ನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸಲಾಗಿದೆ. ಸದರಿ ರೂ.0.75 ಲಕ್ಷ ರೂಪಾಯಿಯನ್ನು ಶ್ರೀಮತಿ ಬೀಬಿಜಾನ್ ಕೋಂ ಲೇಟ್ ರಾಜಾಖಾನ್, ತಿಮ್ಮನಹಳ್ಳಿ, ಇವರಿಂದ ಕಂದಾಯ ಬಾಕಿಯಂತೆ ವಸೂಲಿ ಮಾಡಲು ಸಂಬಂಧಪಟ್ಟ ವ್ಯಾಪ್ತಿಯ ಕಂದಾಯ ಅಧಿಕಾರಿಗಳಿಗೆ ಕೋರಲು ನಿರ್ದೇಶಿಸಲಾಗಿದೆ. ಮತ್ತು ಕೃತ್ಯಕ್ಕೆ ಬಳಿಸಿದ ವಾಹನವು ಪ್ರಕರಣದಲ್ಲಿ ಬಾಗಿಯಾಗಿರುತ್ತದೆ, ಎಂದು ಸ್ಪಷ್ಟವಾಗಿ ಕಂಡುಬಂದಿರುವುದರಿಂದ ಸದರಿ ವಾಹನ ಟ್ರ್ಯಾಕ್ಟರ್ ಹಾಗೂ ಟ್ರೈಲರ್‌ಅನ್ನು ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ಈ ವಾಹನವು ಹಾಲಿ ಇರುವ ಸ್ಥಳದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ವಾಹನದ ಅಮಾನತ್ತು ಪ್ರಕ್ರಿಯೆಯಲ್ಲಿ ಸಹಕರಿಸಲು ಕೋರಲು ಹಾಗೂ ಅದೇ ರೀತಿ ಸಂಬಂಧ ಪಟ್ಟ ವ್ಯಾಪ್ತಿಯ ಇಲಾಖಾ ಅಧಿಕಾರಿಗಳಿಗೆ ವಾಹನವನ್ನು ವಶಕ್ಕೆ ತೆಗೆದುಕೊಳ್ಳಲು ಸೂಚಿಸಲು ಆದೇಶಿಸಲಾಗಿದೆ.

ಈ ವಾಹನವು ಎಲ್ಲಾ ಋಣ ಭಾರಗಳಿಂದ ಮುಕ್ತವಾಗಿದೆ ಎಂದು ಸದರಿ ಆದೇಶವನ್ನು ನನ್ನ ಉಕ್ತ ಲೇಖನದಂತೆ ಬೆರಳಚ್ಚುಗಾರರು ಸಿದ್ದ ಪಡಿಸಿದ ನಂತರ ಪರಿಶೀಲನೆ ಮಾಡಿ ನ್ಯಾಯಾಲಯದಲ್ಲಿ ಈ ದಿನ ಅಂದರೆ ದಿನಾಂಕ: 19–02–2011ರಂದು ನನ್ನ ಸಹಿ ಹಾಗೂ ಮುದ್ರೆಯೊಂದಿಗೆ ಆದೇಶ ಹೊರಡಿಸಲಾಗಿದೆ.

ಪ್ರಾಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ತುಮಕೂರು ವಿಭಾಗ, ತುಮಕೂರು

**ಅನುಬಂಧ**

1) ಅಭಿಯೋಜನದ ಪರ ವಿಚಾರಣೆ ಮಾಡಲಾದ ಸಾಕ್ಷಿಗಳು:
ಪ್ರಾ.ಸಾ – 1. ಬಿ.ಸಿ.ಹರೀಶ್, ವಲಯ ಅರಣ್ಯಾಧಿಕಾರಿ,
ಬುಕ್ಕಾಪಟ್ಟಣ ವಲಯ, ಬುಕ್ಕಾಪಟ್ಟಣ.
ಪ್ರಾಸಾ – 2. ಅಂಚೆ ಹನುಮಂತರಾಯಪ್ಪ, ಅರಣ್ಯ ರಕ್ಷಕ,
ಬುಕ್ಕಾಪಟ್ಟಣ ವಲಯ, ಬುಕ್ಕಾಪಟ್ಟಣ.

2) ಅಭಿಯೋಜನದ ಪರ ಗುರ್ತಿಸಿಕೊಂಡ ದಾಖಲೆಗಳು:–
ನಿಶಾನೆ: 1. ಪ್ರಥಮ ಮಾಹಿತಿ ವರದಿ
2. ಮಹಜರ್
3. ಸೀಜರ್ ರಿಪೋರ್ಟ್
4. ತನಿಖಾ ವರದಿ
5. ಅಪರಾಧಿಗಳ ಹೇಳಿಕೆ (ರಾಜಾಖಾನ್)

3) ಅಭಿಯೋಜನದ ಪರ ಗುರ್ತಿಸಿಕೊಂಡ ಮುದ್ದೆಮಾಲುಗಳು:–
ಎಂ.ಒ. 1) ಟ್ರಾಕ್ಟರ್ ಕೆ.ಎ 44–7–1713 ಟ್ರೈಲರ್ ಸಂಖ್ಯೆ: ಕೆ.ಎ.44–ಟಿ–1714
2) 2 ನೀಲಗಿರಿ ತುಂಡುಗಳು/ 5–5 ಘನ ಮೀಟರ್

ಪ್ರಾಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ತುಮಕೂರು ವಿಭಾಗ, ತುಮಕೂರು

**ಪಿ.ಆರ್. 1030**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆರ್‌ಡಿ 66 ಎಎಸ್‌ಡಿ 2012, ಬೆಂಗಳೂರು, ದಿನಾಂಕ: 31–08–2012.**

ಅಧಿಸೂಚನೆ ಸಂಖ್ಯೆ:ಕಂಇ 04 ಎಟಿಎಸ್ 1996, ದಿನಾಂಕ: 01.04.1998 ರಲ್ಲಿ ಪ್ರಕಟಗೊಂಡ ತಹಶೀಲ್ದಾರ್ ಗ್ರೇಡ್–1 ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಜೇಷ್ಠತಾ ಸಂಖ್ಯೆ:251 ರ ಶ್ರೀ ಕೆ.ಜಿ.ರಮಾನಾಥ ಶೆಟ್ಟಿ ಹಾಗೂ ಜೇಷ್ಠ ಸಂಖ್ಯೆ:252 ರಲ್ಲಿ ಶ್ರೀ ಎಂ.ಕೆ.ಶ್ರೀರಂಗಯ್ಯ ಅವರ ಮಧ್ಯೆ ಶ್ರೀಮತಿ ಸಿ.ಪಿ.ಶೈಲಜ ಅವರ ಜೇಷ್ಠತೆಯನ್ನು 251–ಎ ಎಂದು ಪ್ರಕಟಿಸಿರುವುದನ್ನು ಪರಿಷ್ಕರಿಸಿ ಶ್ರೀ ಎಸ್.ಪಾಲಯ್ಯ ಅವರ ಜೇಷ್ಠತೆಯನ್ನು 251–ಎ ಎಂತಲೂ ಹಾಗೂ ಶ್ರೀಮತಿ ಸಿ.ಪಿ.ಶೈಲಜ ಅವರ ಜೇಷ್ಠತೆಯನ್ನು 251–ಬಿ ಎಂದು ಸೇರಿಸಿ ಒಂದು ಅಧಿಸೂಚನೆ ಹೊರಡಿಸುವ ಬಗ್ಗೆ ಸಂಬಂಧಿಸಿದವರಿಂದ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಅವುಗಳನ್ನು ಅಗತ್ಯ ದಾಖಲೆಗಳೊಂದಿಗೆ ಲಿಖಿತವಾಗಿ 15 ದಿನಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸುವಂತೆ ದಿನಾಂಕ:12.06.2012 ರಂದು ಅಧಿಸೂಚನೆ ಹೊರಡಿಸಲಾಗಿತ್ತು.

ಇದರಿಂದ, ಬಾದಿತರಾದ ಶ್ರೀ ಎಂ.ಕೆ.ಶ್ರೀರಂಗಯ್ಯ, ಅಪರ ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ ಅವರು ನಿಗಧಿಪಡಿಸಿದ ಅವಧಿಯೊಳಗೆ ಈ ಅಧಿಸೂಚನೆಗೆ ಆಕ್ಷೇಪಣೆ ಸಲ್ಲಿಸಿರುತ್ತಾರೆ. ಕರ್ನಾಟಕ ನಾಗರೀಕ ಸೇವಾ (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳನ್ನು ವೃಂದ `ಎ` ಮತ್ತು `ಬಿ` ಗುಂಪಿನ ಹುದ್ದೆಗಳಿಗೆ ವಿಶೇಷ ನೇಮಕಾತಿ) ನಿಯಮಾವಳಿ 1985 ರನ್ವಯ ಪರಿವೀಕ್ಷಣ ತಹಶೀಲ್ದಾರ್ ಗ್ರೇಡ್–2 ವೃಂದಕ್ಕೆ ನೇಮಕಾತಿ ಹೊಂದಿದ ತಹಶೀಲ್ದಾರರುಗಳ ಜೇಷ್ಠತೆಯನ್ನು ಸರ್ಕಾರಿ ಅಧಿಸೂಚನೆ ಸಂಖ್ಯೆ:ಆರ್‌ಡಿ 12 ಎಎಸ್‌ಜಿ 2001, ದಿನಾಂಕ:11.06.2007 ರಲ್ಲಿ ಪ್ರಕಟಿಸಿರುವ ತಹಶೀಲ್ದಾರ್ ಗ್ರೇಡ್–2 ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ನಿಗಧಿಪಡಿಸಿರುವ ಜೇಷ್ಠತಾ ಕ್ರಮಾಂಕ ಸರಿ ಇರುತ್ತದೆ. ಈ ಜೇಷ್ಠತಾ ಪಟ್ಟಿ ಆಯ್ಕೆ ಪಟ್ಟಿಯಂತೆ ಇದ್ದು, ಈ ಜೇಷ್ಠತಾ ಪಟ್ಟಿ ಆಧಾರದ ಮೇಲೆ ಸರ್ಕಾರಿ ಅಧಿಸೂಚನೆ ಸಂಖ್ಯೆ:ಆರ್‌ಡಿ 08 ಎಟಿಎಸ್ 1996, ದಿನಾಂಕ:29.05.1996 ರಲ್ಲಿ ತಹಶೀಲ್ದಾರ್ ಗ್ರೇಡ್–2 ವೃಂದದಿಂದ ತಹಶೀಲ್ದಾರ್ ಗ್ರೇಡ್–1 ವೃಂದಕ್ಕೆ ಈ ಕೆಳಕಂಡ ಕ್ರಮಾಂಕದಲ್ಲಿ ಪದೋನ್ನತಿ ನೀಡಲಾಗಿದೆ ಎಂದು ತಿಳಿಸಿರುತ್ತಾರೆ.

1. ಶ್ರೀ ಎಂ.ಕೆ.ಶ್ರೀರಂಗಯ್ಯ
2. ಶ್ರೀ ಕೆ.ಜಿ.ರಮಾನಾಥ ಶೆಟ್ಟಿ
3. ಶ್ರೀಮತಿ ಸಿ.ಪಿ.ಶೈಲಜ

ಮುಂದುವರೆದು ಪದೋನ್ನತಿ ನೀಡುವ ಸಂದರ್ಭದಲ್ಲಿ ಮೀಸಲಾತಿ ಬಿಂದುವನ್ನು ಅನುಸರಿಸಿ, ಪರಿಶಿಷ್ಟ ಜಾತಿಗೆ ಸೇರಿದ ಅವರನ್ನು ಪರಿಶಿಷ್ಟ ಜಾತಿಗೆ ಮೀಸಲಿಟ್ಟ ಬಿಂದುವಿನ ಆಧಾರದ ಮೇಲೆ ಪರಿಗಣಿಸಿ ಇಲಾಖಾ ಮುಂಬಡ್ತಿ ಸಮಿತಿ ನಡವಳಿಯನ್ನು ಮಾಡಿ, ಸರ್ಕಾರಿ ಅಧಿಸೂಚನೆ ಸಂಖ್ಯೆ:ಆರ್‌ಡಿ 12 ಎಎಸ್‌ಜಿ 2001, ದಿನಾಂಕ:11.06.2007 ರಲ್ಲಿ ಪ್ರಕಟಿಸಿರುವ ಜೇಷ್ಠತಾ ಪಟ್ಟಿಯಲ್ಲಿ ಹಿರಿಯವರನಾಗಿದ್ದರೂ ಸಹ ಅವರಿಗೆ ಪರಿಶಿಷ್ಟ ಜಾತಿ ಮೀಸಲಾತಿ ಬಿಂದುವಿನ ಆಧಾರದ ಮೇಲೆ ಉಳಿದ ಎಲ್ಲಾ ಅಭ್ಯರ್ಥಿಗಳಿಗಿಂತ ಅವರ ಜೇಷ್ಠತೆಯನ್ನು ಮೇಲ್ಭಾಗದಲ್ಲಿ ನಮೂದಿಸಿರುವುದು ಕ್ರಮಬದ್ಧವಾಗಿರುತ್ತದೆಂದು ತಿಳಿಸಿರುತ್ತಾರೆ.

ಅವರಿಗೆ ಪದೋನ್ನತಿ ನೀಡುವ ಸಂದರ್ಭದಲ್ಲಿ, ಆರು ಅಭ್ಯರ್ಥಿಗಳ ಪೈಕಿ ಮೂರು ಜನಕ್ಕೆ ಮಾತ್ರ ತಹಶೀಲ್ದಾರ್ ಗ್ರೇಡ್–1 ಪದೋನ್ನತಿ ನೀಡಿದ್ದು, ಉಳಿದ 2 ಅಭ್ಯರ್ಥಿಗಳಾದ ಶ್ರೀಮತಿ ಶೈಲಜಾ ಮತ್ತು ಶ್ರೀ ಶಿವಯ್ಯ ಇವರ ಬಗ್ಗೆ ಸಿಸಿಎ ಪ್ರಕರಣವಿದ್ದ ಕಾರಣ ಹಾಗೂ ಶ್ರೀ ಉಪೇಂದ್ರ ನಾಯಕ್ ರವರು ಇಲಾಖಾ ಪರೀಕ್ಷೆ ಉತ್ತೀರ್ಣರಾಗದ ಕಾರಣ ತಹಶೀಲ್ದಾರ್ ಗ್ರೇಡ್–1 ಹುದ್ದೆಗೆ ಪದೋನ್ನತಿ ನೀಡಿರಲಿಲ್ಲ. ತದ ನಂತರ ಸರ್ಕಾರಿ ಅಧಿಸೂಚನೆ ಸಂಖ್ಯೆ:ಕಂಇ 15 ಎಟಿಎಸ್ 2000, ದಿನಾಂಕ:18.01.2001 ರಲ್ಲಿ ಶ್ರೀಮತಿ ಶೈಲಜಾ ರವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಗಳು (ಆರ್‌ಪಿಪಿಪಿ) ನಿಯಮ 1978 ರ ನಿಯಮ 3(1)(ಎ) ರನ್ವಯ ಜೇಷ್ಠತೆಯಲ್ಲಿ ಅವರಿಗಿಂತ ಕಿರಿಯರಾದ ಶ್ರೀ ಎಂ.ಕೆ.ಶ್ರೀರಂಗಯ್ಯ ರವರಿಗೆ ಮುಂಬಡ್ತಿ ನೀಡಿದ ದಿನಾಂಕ:29.05.1996 ರಿಂದ ಪೂರ್ವಾನ್ವಯವಾಗುವಂತೆ ತಹಶೀಲ್ದಾರ್ ಗ್ರೇಡ್–1 ಹುದ್ದೆಗೆ ಮುಂಬಡ್ತಿ ನೀಡಲಾಗಿದೆ ಎಂದು ತಿಳಿಸಲಾಗಿದೆ. ಈಗಾಗಲೇ ಮೇಲ್ಭಾಗದಲ್ಲಿ ವಿವರಿಸಿದಂತೆ ಶ್ರೀಮತಿ ಶೈಲಜಾ ರವರಿಗಿಂತ ತಹಶೀಲ್ದಾರ್ ಗ್ರೇಡ್–2 ಜೇಷ್ಠತೆಯಲ್ಲಿ ಕಿರಿಯವರಾಗಿದ್ದರೂ ಸಹ ನನಗೆ ಪರಿಶಿಷ್ಟ ಜಾತಿ ಮೀಸಲಾತಿ ಬಿಂದುವನ್ನು ಅನುಸರಿಸಿ ಪದೋನ್ನತಿ ನೀಡಿದ್ದರಿಂದ ತಹಶೀಲ್ದಾರ್ ಗ್ರೇಡ್–1 ಜೇಷ್ಠತಾ ಪಟ್ಟಿಯಲ್ಲಿ ಸ್ವಾಭಾವಿಕವಾಗಿ ಅವರ ಹೆಸರು ಈ ಬ್ಯಾಚ್‌ನ ಎಲ್ಲಾ ಅಭ್ಯರ್ಥಿಗಳಿಗಿಂತ ಮೇಲ್ಭಾಗದ ಜೇಷ್ಠತೆ ಕ್ರಮಾಂಕದಲ್ಲಿ ಇಡಬೇಕಾಗಿರುತ್ತದೆ. ಅಲ್ಲದೇ ಜೇಷ್ಠತಾ ಪಟ್ಟಿ ಅಂತಿಮಗೊಳಿಸಿ ಆಕ್ಷೇಪಣೆ ಕರೆಯಲಾಗಿದ್ದರೂ ಸಹ ಆ ಸಂದರ್ಭದಲ್ಲಿ ಆಕ್ಷೇಪಣೆ ಸಲ್ಲಿಸದೆ ಈಗ ಜೇಷ್ಠತಾ ಪಟ್ಟಿ ಸರಿಪಡಿಸಲು ಕೋರಿಕೆ ಸಲ್ಲಿಸಿರುವುದು ನಿಯಮಾವಳಿ ಪ್ರಕಾರ ಸಮಂಜಸವಾಗಿಲ್ಲವೆಂದು ಆಕ್ಷೇಪಣೆಯನ್ನು ಸಲ್ಲಿಸಿರುತ್ತಾರೆ.

ಶ್ರೀ ಎಸ್.ಪಾಲಯ್ಯ ಅವರ ಆಕ್ಷೇಪಣೆಗಳನ್ನು ಪರಿಶೀಲಿಸಲಾಗಿ, ಅವರ ಆಕ್ಷೇಪಣೆಯಂತೆ ಅವರು ತಿಳಿಸಿರುವಂತೆ ಸರ್ಕಾರಿ ಅಧಿಸೂಚನೆ ಸಂಖ್ಯೆ:ಕಂಇ 08 ಎಟಿಎಸ್ 1996, ದಿನಾಂಕ:29.05.1996 ರಲ್ಲಿ ತಹಶೀಲ್ದಾರ್ ಗ್ರೇಡ್–2 ವೃಂದದಿಂದ ತಹಶೀಲ್ದಾರ್ ಗ್ರೇಡ್–1 ವೃಂದಕ್ಕೆ ಶ್ರೀ ಎಂ.ಕೆ.ಶ್ರೀರಂಗಯ್ಯ, ಶ್ರೀ ಎಸ್.ಪಾಲಯ್ಯ ಮತ್ತು ಶ್ರೀ ನಾಗರಾಜ್ ಅವರಿಗೆ ಒಂದೇ ಅಧಿಸೂಚನೆಯಲ್ಲಿ ಒಂದೇ ದಿನಾಂಕದಂದು ಪದೋನ್ನತಿ ನೀಡಲಾಗಿದೆ. ಸೇವಾ ಹಿರಿತನವನ್ನು ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಾವಳಿ 1957 ರ ನಿಯಮ 4 ರನ್ವಯ ನಿಗಧಿಪಡಿಸಬೇಕಾಗುತ್ತದೆ. ಸದರಿ ನಿಯಮದ ಉದೃತ ಭಾಗ ಈ ಕೆಳಕಂಡಂತಿದೆ:

When promotions to a class of post or Cadre are made on the basis of Seniority–cum–merit at the same time, the relative seniority shall be determined:–

i) If promotions are made from any one cadre or class of post, by their seniority inter–se in the lower cadre or class of post;

ಈ ನಿಯಮದನ್ವಯ, ಒಂದೇ ತಂಡದಲ್ಲಿ ಆಯ್ಕೆಯಾದವರ ಪದೋನ್ನತಿ ಒಂದೇ ದಿನಾಂಕದಂದು ನೀಡಿದಾಗ ಆಯ್ಕೆಯಾದ ಜೇಷ್ಠತೆಯನುಸಾರ ಸೇವಾ ಜೇಷ್ಠತೆಯನ್ನು ನಿಗಧಿಪಡಿಸಬೇಕಾಗಿರುತ್ತದೆ. ಈ ತತ್ವದ ಆಧಾರದ ಮೇರೆಗೆ ಶ್ರೀಮತಿ ಸಿ.ಪಿ.ಶೈಲಜಾ ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಗಳು (ಆರ್‌ಪಿಪಿಪಿ) ನಿಯಮ 1978 ರ ನಿಯಮ 3(1)(ಎ) ರನ್ವಯ ಜೇಷ್ಠತೆಯಲ್ಲಿ ಅವರಿಗಿಂತ ಕಿರಿಯರಾದ ಶ್ರೀ ಎಂ.ಕೆ.ಶ್ರೀರಂಗಯ್ಯವರಿಗೆ ಪದೋನ್ನತಿ ನೀಡಿದ ದಿನಾಂಕದಿಂದಲೇ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ತಹಶೀಲ್ದಾರ್ ಗ್ರೇಡ್–1 ವೃಂದಕ್ಕೆ ಸರ್ಕಾರಿ ಅಧಿಸೂಚನೆ ಸಂಖ್ಯೆ:ಕಂಇ 15 ಎಟಿಎಸ್ 2000, ದಿನಾಂಕ:18.02.2001 ರಂದು ಪದೋನ್ನತಿ ನೀಡಲಾಗಿದೆ.

ಮುಂದುವರೆದು, ಸರ್ಕಾರಿ ಅಧಿಸೂಚನೆ ಸಂಖ್ಯೆ:ಕಂಇ 04 ಎಟಿಎಸ್ 1996, ದಿನಾಂಕ: 01.04.1998 ರಲ್ಲಿ ಪ್ರಕಟಗೊಂಡ ತಹಶೀಲ್ದಾರರ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಜೇಷ್ಠತಾ ಸಂಖ್ಯೆ:251 ರ ಶ್ರೀ ಕೆ.ಜಿ.ರಾಮನಾಥ ಶೆಟ್ಟಿ ಹಾಗೂ ಜೇಷ್ಠತಾ ಸಂಖ್ಯೆ:252 ರ ಶ್ರೀ ಎಂ.ಕೆ. ಶ್ರೀರಂಗಯ್ಯ ರವರ ನಡುವೆ 251–ಎ ಎಂದು ಸೇರಿಸಿ, ಶ್ರೀಮತಿ ಸಿ.ಪಿ.ಶೈಲಜಾ ರವರ ಹೆಸರನ್ನು ತಹಶೀಲ್ದಾರ್ ಗ್ರೇಡ್–1 ವೃಂದದ ಜೇಷ್ಠತಾ ಪಟ್ಟಿಯಲ್ಲಿ ಸೇರಿಸಲು ಆಕ್ಷೇಪಣೆಗಳನ್ನು ಸರ್ಕಾರಿ ಅಧಿಸೂಚನೆ ಸಂಖ್ಯೆ:ಕಂಇ 15 ಎಟಿಎಸ್ 2000, ದಿನಾಂಕ:15.06.2002 ರಲ್ಲಿ ಕೋರಲಾಗಿ ಈ ಅವಧಿಯಲ್ಲಿ ಯಾವುದೇ ಆಕ್ಷೇಪಣೆ ಬಾರದೇ ಇದ್ದುದರಿಂದ ಸರ್ಕಾರಿ ಅಧಿಸೂಚನೆ ಸಂಖ್ಯೆ:ಆರ್‌ಡಿ 15 ಎಟಿಎಸ್ 2000, ದಿನಾಂಕ:16.11.2002 ರಲ್ಲಿ ಶ್ರೀಮತಿ ಸಿ.ಪಿ.ಶೈಲಜಾ ಅವರ ಹೆಸರನ್ನು 251–ಎ ಎಂದು ಸೇರಿಸಿ ಸೇರ್ಪಡೆ ಮಾಡಿ ಶ್ರೀ ಎಂ.ಕೆ.ಶ್ರೀರಂಗಯ್ಯ ಅವರಿಗಿಂತ ಮೇಲೆ ಸೇವಾ ಜೇಷ್ಠತೆ ನಿಗಧಿಪಡಿಸಲಾಗಿದೆ. ಈ ಸೇರ್ಪಡೆ ಆದೇಶದ ಮೇರೆಗೆ ಕೆ.ಎ.ಎಸ್ (ಕಿ.ಶ್ರೇ) ಸರ್ಕಾರಿ ಅಧಿಸೂಚನೆ ಸಂಖ್ಯೆ:ಸಿಆಸುಇ 03 ಎಸ್‌ಕೆಜಿ 2000, ದಿನಾಂಕ:04.03.2006 ರಲ್ಲಿ ಶ್ರೀಮತಿ ಸಿ.ಪಿ.ಶೈಲಜಾ ರವರ ಹೆಸರನ್ನು ಜೇಷ್ಠತಾ ಸಂಖ್ಯೆ:1168 ರಲ್ಲು, ಶ್ರೀ ಎಂ.ಕೆ. ಶ್ರೀರಂಗಯ್ಯ ರವರ ಹೆಸರನ್ನು ಜೇಷ್ಠತಾ ಸಂಖ್ಯೆ:1169 ಮತ್ತು ಶ್ರೀ ಎಸ್.ಪಾಲಯ್ಯ ಅವರ ಹೆಸರನ್ನು ಜೇಷ್ಠತಾ ಸಂಖ್ಯೆ:1171 ರಲ್ಲಿ ಪ್ರಚುರಪಡಿಸಲಾಗಿದೆ.

ಶ್ರೀಮತಿ ಸಿ.ಪಿ.ಶೈಲಜಾ ಮತ್ತು ಶ್ರೀ ಎಸ್.ಪಾಲಯ್ಯ ಇಬ್ಬರು ಪರಿಶಿಷ್ಟ ಪಂಗಡದ ಅಧಿಕಾರಿಗಳು ಸೇವೆಗೆ ಸೇರುವ ಆಯ್ಕೆಪಟ್ಟಿಯಲ್ಲಿ ಶ್ರೀ ಎಸ್.ಪಾಲಯ್ಯ ಅವರು ಶ್ರೀಮತಿ ಸಿ.ಪಿ.ಶೈಲಜಾ ಅವರಿಗಿಂತ ಮೇಲಿನ ಕ್ರಮಾಂಕದಲ್ಲಿರುತ್ತಾರೆ. ಶ್ರೀ ಎಂ.ಕೆ. ಶ್ರೀರಂಗಯ್ಯ ರವರಿಗಿಂತ ಶ್ರೀ ಎಸ್.ಪಾಲಯ್ಯ ಮತ್ತು ಶ್ರೀಮತಿ ಸಿ.ಪಿ.ಶೈಲಜಾ ಅವರು ಹಿರಿಯರಾಗಿದ್ದು, ಶ್ರೀಮತಿ ಸಿ.ಪಿ.ಶೈಲಜಾ ಅವರ ಹೆಸರನ್ನು ಮಾತ್ರ ಶ್ರೀ ಎಂ.ಕೆ. ಶ್ರೀರಂಗಯ್ಯ, ಅವರಿಗಿಂತ ಮೇಲಿನ ಜೇಷ್ಠತೆಯಲ್ಲಿ ಪ್ರಕಟಿಸಲಾಗಿದೆ. ಆದರೆ, ಶ್ರೀ ಎಸ್.ಪಾಲಯ್ಯ ಅವರನು ಕೆಳಗಡೆ ಸೇವಾ ಜೇಷ್ಠತೆ ನಿಗಧಿ ಪಡಿಸಿರುವುದು ಕರ್ನಾಟಕ ಸರ್ಕಾರಿ ನೌಕರರುಗಳ (ಜೇಷ್ಠತೆ) ನಿಯಮಗಳು 1957 ರ ನಿಯಮ 4(1) ಕ್ಕೆ ವಿರುದ್ಧವಾಗಿರುತ್ತದೆ. ವಾಸ್ತವವಾಗಿ ಶ್ರೀ ಎಸ್.ಪಾಲಯ್ಯ ಅವರ ಹೆಸರನ್ನು ಶ್ರೀಮತಿ ಸಿ.ಪಿ.ಶೈಲಜಾ ಅವರಿಗಿಂತ ಮೇಲೆ ಪ್ರಕಟಿಸುವುದು ನಿಯಮಗಳಿಗನುಸಾರವಾಗಿರುತ್ತದೆ. ಶ್ರೀ ಎಂ.ಕೆ.ಶ್ರೀರಂಗಯ್ಯ ಅವರ ಆಕ್ಷೇಪಣೆಯನ್ನು ತಿರಸ್ಕರಿಸಿ ಸರ್ಕಾರಿ ಅಧಿಸೂಚನೆ ಸಂಖ್ಯೆ: ಆರ್‌ಡಿ 4 ಎಟಿಎಸ್ 1996, ದಿನಾಂಕ: 01.04.1998ರ ಅಧಿಸೂಚನೆಯಲ್ಲಿ ಶ್ರೀಮತಿ ಸಿ.ಪಿ.ಶೈಲಜಾ ಅವರ ಜೇಷ್ಠತೆಯನ್ನು ಆಯ್ಕೆಪಟ್ಟಿಯಲ್ಲಿ ಶ್ರೀ ಎಸ್.ಪಾಲಯ್ಯ ಅವರಿಗಿಂತ ಕಿರಿಯರಾಗಿರುವುದರಿಂದ, ಅವರ ಹೆಸರನ್ನು ಕ್ರ.ಸಂ. 251 ರ ಶ್ರೀ ಕೆ.ಜಿ.ರಮಾನಾಥ ಶೆಟ್ಟಿ ಹಾಗೂ ಕ್ರ.ಸಂ.252 ರ ಶ್ರೀ ಎಂ.ಕೆ.ಶ್ರೀರಂಗಯ್ಯ ನವರ ಮಧ್ಯೆ ಈ ಕೆಳಕಂಡಂತೆ ಜೇಷ್ಠತೆಯನ್ನು ಪರಿಷ್ಕರಿಸಲಾಗಿದೆ.

| ಕ್ರ.ಸಂ. | ಅಧಿಕಾರಿಯ ಹೆಸರು | ಜನ್ಮ ದಿನಾಂಕ | ತಹಶೀಲ್ದಾರ್ ಗುಂಪು-ಬಿ ವೃಂದದಲ್ಲಿ ನೀಡಲಾದ ಅರ್ಹತಾ ದಿನಾಂಕ | ತಹಶೀಲ್ದಾರ್ ಗ್ರೇಡ್-1 ವೃಂದಕ್ಕೆ ಮುಂಬಡ್ತಿ ಹೊಂದಿದ ದಿನಾಂಕ |
|---|---|---|---|---|
| 251-ಎ | ಶ್ರೀ ಎಸ್.ಪಾಲಯ್ಯ | 01.07.1959 | 14.09.1993 | 29.05.1996 |
| 251-ಬಿ | ಶ್ರೀಮತಿ ಸಿ.ಪಿ.ಶೈಲಜ | 27.02.1961 | 23.09.1993 | 29.05.1996 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ.ರಾಮಲಿಂಗಯ್ಯ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3).

**ಪಿ.ಆರ್. 1200**

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ನ್ಯಾಯಾಲಯದಲ್ಲಿ ಕೋಲಾರ

**ಪ್ರಕರಣ ಸಂಖ್ಯೆ :- ಡಬ್ಲ್ಯೂ/ಸಿಎ/ಎಫ್‌ಸಿ :-09/2011**

**ಅರ್ಜಿದಾರರು**

1. .ಶ್ರೀಮತಿ ಪ್ರೇಮ ಕೋಂ ಲೇಟ್ ವೆಂಕಟರಾಮಯ್ಯ
2. ಮಾಸ್ಟರ್ ಅಮರೇಶ್ ಬಿನ್ ಲೇಟ್ ವೆಂಕಟರಾಮಯ್ಯ
3. ಮಾಸ್ಟರ್ ದಿನೇಶ್ ಬಿನ್ ಲೇಟ್ ವೆಂಕಟರಾಮಯ್ಯ

ವಾಸ:- ದಿನ್ನೂರು (ವಿ) ಬಲಮಂದ ಅಂಚೆ ಬೂದಿಕೋಟೆ ಹೋಬಳಿ ಬಂಗಾರಪೇಟೆ ತಾ ಕೋಲಾರ ಜಿ

**ವಿರುದ್ಧ**

**ಪ್ರತಿವಾದಿಗಳು**

ಶ್ರೀ ಸುಬ್ರಮಣ್ಯಂ ಬಿನ್ ಗೋರೆಲ್ಲ ವೆಂಕಟಸ್ವಾಮಿ
ವಾಸ:- ಗಡ್ಡರು ಗ್ರಾ ಮಡಗಲಪಟ್ಟಿ (ಪಂ)
ಪುಂಗನೂರು ಮಂಡಲಂ ಚಿತ್ತೂರು ಜಿ

**ಅಧಿಸೂಚನೆ**

ಅರ್ಜಿದಾರರಾದ **ಶ್ರೀಮತಿ ಪ್ರೇಮ** ಅವರು ತಮ್ಮ ಗಂಡ _ಲೇಟ್ ವೆಂಕಟರಾಮಯ್ಯ ಅವರು ದಿ. **ಶ್ರೀ ಕೆ.ಜಿ. ಸುಬ್ರಮಣ್ಯಂ** ಬಳಿ **ಕೂಲಿ** ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ **ದಿ:-01-06-2009** ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ, ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿದಲಾಗುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಹಾಗೂ ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ:- 29-09-2011 ರಂದು ನೀಡಲಾಗಿದೆ.

**ಎಸ್.ರೇವಣ್ಣ**

ಕಾರ್ಮಿಕ ಅಧಿಕಾರಿ ಮತ್ತು ನಷ್ಟ ಪರಿಹಾರ ಆಯುಕ್ತರು

ಕೋಲಾರ ಉಪ ವಿಭಾಗ, ಕೋಲಾರ.

**ಪಿ.ಆರ್. 1076**

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ನ್ಯಾಯಾಲಯದಲ್ಲಿ ಕೋಲಾರ

**ಪ್ರಕರಣ ಸಂಖ್ಯೆ :- ಡಬ್ಲ್ಯೂ/ಸಿಎ/ಎಫ್‌ಸಿ :-11/2011**

**ಅರ್ಜಿದಾರರು**

1. ಶ್ರೀಮತಿ ಮಾಲಾ ಕೋಂ ಲೇಟ್ ಮುನಿಯಪ್ಪ
2. ಕುಮಾರಿ ಸ್ವಾತಿ ಬಿನ್ ಲೇಟ್ ಮುನಿಯಪ್ಪ
3. ಮಾಸ್ಟರ್ ಬಾಲಾಜಿ ಬಿನ್ ಲೇಟ್ ಮುನಿಯಪ್ಪ
4. ವೆಂಕಟಪ್ಪ ಬಿನ್ ವೆಂಕಟರಾಮಪ್ಪ

ವಾಸ:- ಎಡಿ.ಕಾಲೋನಿ ಗಾಂಧಿ ಸರ್ಕಲ್ ಪಟೇಲಮ್ಮ ಬಡಾವಣೇ ಟೌನ್ ಕೋಲಾರ ಜಿ

**ವಿರುದ್ಧ**

**ಪ್ರತಿವಾದಿಗಳು**

1. ಐ ಅಬಿದುಲ್ಲಾಖಾನ್ ಬಿನ್ ಇನಾಯತ್ ವುಲ್ಲಾ ಖಾನ್
   ವಾಸ:- ನಂ;100 ಸೀತಾನಾಯಕನಹಳ್ಳಿ ಲಕ್ಕೂರು ಹೋಬಳಿ ಮಾಲೂರು ತಾ
2. ಯುನೈಟಡ್ ಇಂಡಿಯಾ ಇನ್‌ಶ್ಯೂರೆನ್ಸ್ ಕಂ.ಲಿ, ಡಿವಿಜನಲ್ ಕಛೇರಿ ರಾಬರ್ಟ್‌ಸನ್‌ಪೇಟೆ ಕೆಜಿ.ಎಫ್ ಕೋಲಾರ

**ಅಧಿಸೂಚನೆ**

ಅರ್ಜಿದಾರರಾದ .ಶ್ರೀಮತಿ ಮಾಲಾ ಅವರು ತಮ್ಮ ಗಂಡ _ಲೇಟ್ ಮುನಿಯಪ್ಪ ಅವರು **ದಿ.** ಐ ಅಬಿದುಲ್ಲಾಖಾನ್ ಬಳಿ **ಚಾಲಕ** ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ **ದಿ:–13–08–2011** ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ, ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿದಲಾಗುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಹಾಗೂ ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ:– 20–04–2012 ರಂದು ನೀಡಲಾಗಿದೆ.

**ಎಸ್.ರೇವಣ್ಣ**
ಕಾರ್ಮಿಕ ಅಧಿಕಾರಿ ಮತ್ತು ನಷ್ಟ ಪರಿಹಾರ ಆಯುಕ್ತರು
ಕೋಲಾರ ಉಪ ವಿಭಾಗ, ಕೋಲಾರ.

**ಪಿ.ಆರ್. 1078**

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ನ್ಯಾಯಾಲಯದಲ್ಲಿ ಕೋಲಾರ**

**ಪ್ರಕರಣ ಸಂಖ್ಯೆ :– ಡಬ್ಲ್ಯೂ/ಸಿಎ/ಎಫ್‌ಸಿ :–14/2012**

**ಅರ್ಜಿದಾರರು**

1. ಶ್ರೀಮತಿ ಕುಮುಧಾ ಎಂ ಕೋಂ ಲೇಟ್ ರಾಮಚಂದ್ರನ್ ವಯಸ್ಸು 37 ವರ್ಷ
2. ಕುಮಾರಿ ಮಾಲಾರ್ ಆರ್ ಬಿನ್ ಲೇಟ್ ರಾಮಚಂದ್ರನ್ ವಯಸ್ಸು 20 ವರ್ಷ
3. ಕುಮಾರಿ ನಿತ್ಯಾ ಆರ್ ಲೇಟ್ ರಾಮಚಂದ್ರನ್ ವಯಸ್ಸು 17 ವರ್ಷ
4. ಕುಮಾರಿ ದಿನ್ಯ ಆರ್ ಲೇಟ್ ರಾಮಚಂದ್ರನ್ ವಯಸ್ಸು 07 ವರ್ಷ
5. ಮಾಸ್ಟರ್ ಯಶವಂತ್ ರಾಜ್ ಆರ್ ಲೇಟ್ ರಾಮಚಂದ್ರನ್ ವಯಸ್ಸು 05 ವರ್ಷ

ಅರ್ಜಿದಾರರು 3ರಿಂದ 5ರವರು ಅಪ್ರಾಪ್ತ ವಯಸ್ಕಾರಿರುವುದರಿಂದ ಅವರ ಪರ ಅವರ ತಾಯಿಯಾದ ಶ್ರೀಮತಿ ಕುಮುಧಾ 1ನೇ ಅರ್ಜಿದಾರರು ಗಾರ್ಡಿಯನ್ ಆಗಿರುತ್ತಾರೆ
ವಾಸ:–114 2ನೇ ಕ್ರಾಸ್ 6ನೇ ಅಡ್ಡರಸ್ತೆ, ರಾಬರ್ಟ್ಸನ್‌ಪೇಟೆ ಕೆಜಿಎಫ್ ಬಂಗಾರಪೇಟೆ ತಾ ಕೋಲಾರ ಜಿಲ್ಲೆ

**ವಿರುದ್ಧ**

**ಪ್ರತಿವಾದಿಗಳು**

ಶ್ರೀನಿವಾಸ ಬಿನ್ ಮುನಿವೆಂಕಟಪ್ಪ
ವಯಸ್ಕರು ವಾಸ:– ಕುಸನಹಳ್ಳಿ
ಗ್ರಾಮ ಕುಸನಪಲ್ಲಿ ಅಂಚೆ
ರಾಬರ್ಟ್ಸನ್‌ಪೇಟೆ ಹೋಬಳಿ,
ಕೆಜಿಎಫ್ ಬಂಗಾರಪೇಟೆ ತಾ
ಕೋಲಾರ ಜಿ

**ಅಧಿಸೂಚನೆ**

ಅರ್ಜಿದಾರರಾದ .ಶ್ರೀಮತಿ ಕುಮುಧಾ ಎಂ ಅವರು ತಮ್ಮ ಗಂಡ _ಲೇಟ್ ರಾಮಚಂದ್ರನ್ ಅವರು **ದಿ.** ಶ್ರೀನಿವಾಸ ಬಿನ್ ಮುನಿವೆಂಕಟಪ್ಪ ವಯಸ್ಕರು ವಾಸ:– ಕುಸನಹಳ್ಳಿ ಗ್ರಾಮ ಕುಸನಪಲ್ಲಿ ಅಂಚೆ ರಾಬರ್ಟ್ಸನ್‌ಪೇಟೆ ಹೋಬಳಿ, ಕೆಜಿಎಫ್ ಬಂಗಾರಪೇಟೆ ತಾ ಕೋಲಾರ ಜಿ ಬಳಿ **ಗಾರೆ ಮೇಸ್ತ್ರಿ(ಕಾರ್ಮಿಕ)** ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ **ದಿ:–14–12–2011** ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ, ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿದಲಾಗುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಹಾಗೂ ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ:– 05–07–2012 ರಂದು ನೀಡಲಾಗಿದೆ.

**ಎಸ್.ರೇವಣ್ಣ**
ಕಾರ್ಮಿಕ ಅಧಿಕಾರಿ ಮತ್ತು ನಷ್ಟ ಪರಿಹಾರ ಆಯುಕ್ತರು
ಕೋಲಾರ ಉಪ ವಿಭಾಗ, ಕೋಲಾರ.

**ಪಿ.ಆರ್. 1079**